ಪ್ರಕಾಶನಂ -
ಸಂಸ್ಕೃತ ಭಾರತೀ
'ಅಕ್ಷರಂ', 8 ನೇ ಅಡ್ಡರಸ್ತೆ, 2 ನೇ ಹಂತ
ಗಿರಿನಗರ, ಬೆಂಗಳೂರು - 560 085.



ಪ್ರತಿಕೃತಯಃ - 1,00,000

ಆಗಸ್ಟ್ - 2002

ಮೂಲ್ಯಂ - ರೂ. **5.00**

ಮುದ್ರಣಮ್ -
ವಾಗರ್ಥ
ನ.ರಾ. ಕಾಲೋನಿ, ಬೆಂಗಳೂರು - ೧೯

**ISBN 80-88220-42-6**

SAMSKARA BINDU (Kannada script) - A collection of some familiar sentences and hymns with Kannada meaning. Publisher - **Samskrita Bharati,** 'Aksharam', 8th Cross, II Phase, Girinagar, B'lore.
First Print - August-2002 Pages - 40 Price - Rs. 5.00
Printed at - Vagartha, N.R.Colony, Bangalore - 19

# ನಿವೇದನೆ

'ಸಂಸ್ಕೃತವು ಮಧುರವಾದದ್ದು, ಶ್ರೇಷ್ಠವಾದದ್ದು, ದಿವ್ಯ-ಪ್ರಾಚೀನಭಾಷೆ' - ಮುಂತಾದ ಶಬ್ದಗಳಿಂದ ಜನರು ಸಂಸ್ಕೃತವ ಪ್ರಶಂಸೆ ಮಾಡುತ್ತಾರೆ. ಆದರೆ ಪ್ರಶಂಸೆ ಮಾಡುವುದಷ್ಟ-ರಿಂದಲೇ ಸಂಸ್ಕೃತದ ವಿಕಾಸವಾಗಲಾರದು. ಸಂಸ್ಕೃತದಲ್ಲಿ ಮಾತನಾಡಿದಾಗ, ಅದನ್ನು ದಿನನಿತ್ಯ ಬಳಸಿದಾಗ ಮಾತ್ರ ಅದರ ವಿಕಾಸವಾದೀತು. ಆದ್ದರಿಂದ ದಯವಿಟ್ಟು 'ಸಂಸ್ಕೃತದಲ್ಲಿ ಮಾತನಾಡಿ, ಸಂಸ್ಕೃತದ ಬಗ್ಗೆ ಮಾತ್ರ ಅಲ್ಲ.'

ಮಾತನಾಡುವುದರಿಂದ ಸಂಸ್ಕೃತದ ಅಭ್ಯಾಸ ಬೇಗ ಸಾಗುತ್ತದೆ. ಯಾವುದೇ ಭಾಷೆಯ ಅಭ್ಯಾಸ ಆಡುವುದರಿಂದಲೂ ಕೇಳುವುದರಿಂದಲೂ ಆಗುತ್ತದೆ. ಪುಸ್ತಕಗಳನ್ನು ಓದದೆಯೂ, ವ್ಯಾಕರಣನಿಯಮಗಳನ್ನು ಉರುಹಚ್ಚದೆಯೂ ಮಾತನಾಡುವ ಮೂಲಕವೇ ಸಂಸ್ಕೃತವನ್ನು ಕಲಿಯಬಹುದಾಗಿದೆ. ಅದಕ್ಕಾಗಿಯೇ ನಾವೆನ್ನುವುದು - 'ಸಂಸ್ಕೃತದಲ್ಲಿ ಮಾತನಾಡಿ'. ಬರೀ ಶಾಲೆ-ತರಗತಿಗಳಲ್ಲಷ್ಟೇ ಅಲ್ಲ, ಮನೆಯಲ್ಲಿ, ಕಾರ್ಯಾಲಯದಲ್ಲಿ, ಫ್ಯಾಕ್ಟರಿಯಲ್ಲಿ, ಹಾದಿ-ಬೀದಿಗಳಲ್ಲಿ, ಅಂಗಡಿಮುಂಗಟ್ಟುಗಳಲ್ಲಿ, ನೀವು ಇರುವೆಡೆ-ಯಲ್ಲೆಲ್ಲ ಸಂಸ್ಕೃತದಲ್ಲಿ ಮಾತನಾಡಬೇಕು. ಯಾವಾಗಲೂ ಸಂಸ್ಕೃತದಲ್ಲಿ ಮಾತನಾಡಬೇಕು. ವಿದ್ಯಾರ್ಥಿಗಳೊಂದಿಗೆ, ತಂದೆ-ತಾಯಿಯ-ರೊಂದಿಗೆ, ಅಧಿಕಾರಿಗಳೊಂದಿಗೆ, ಸೇವಕರೊಂದಿಗೆ, ಎಲ್ಲ ವಿಧದ ಜನರೊಂದಿಗೂ ಸಂಸ್ಕೃತದಲ್ಲಿ ಮಾತನಾಡಬೇಕು.

ಸಂಸ್ಕೃತಭಾಷೆಯ ಕಲಿಕೆಗೆ ಇರುವ ಒಂದು ಹೆದ್ದಾರಿ-

ಯೆಂದರೆ - ಸಂಸ್ಕೃತದಲ್ಲಿ ಮಾತನಾಡುವುದು. ಸಂಸ್ಕೃತದಲ್ಲಿ ಹೇಗೆ ಮಾತನಾಡಬೇಕೆಂಬ ಕಲ್ಪನೆ ನೀಡುವುದಕ್ಕೋಸ್ಕರ ಈ ಪುಸ್ತಿಕೆಯಲ್ಲಿ ಕೆಲ ವಾಕ್ಯ ಹಾಗೂ ಶಬ್ದಗಳನ್ನು ನೀಡಿದೆ. ಇಲ್ಲಿ ನೀಡಿರುವುದು ಅತ್ಯಲ್ಪ. ಇದರಿಂದ ನೀವು ಮಾತನಾಡುವುದರ ಕಲ್ಪನೆ ಪಡೆಯಬಹುದಷ್ಟೆ. ಆದರೆ ನೆನಪಿಡಿ - ತಮ್ಮೊಳಗೂ ಸಂಸ್ಕೃತ ಹುದುಗಿದ್ದೇ ಇದೆ. ತಮ್ಮ ರಕ್ತದ ಕಣಕಣಗಳಲ್ಲಿ ಸಂಸ್ಕೃತ ಸೇರಿಕೊಂಡಿದೆ. ಅದನ್ನು ಹೊರತರುವ ಪ್ರಯತ್ನ ಮಾಡಿ. ತಪ್ಪಿರಲಿ, ಒಪ್ಪಿರಲಿ, ಧೈರ್ಯದಿಂದ ಮಾತನಾಡಲು ಮೊದಲು ಮಾಡಿ. ಹೆಮ್ಮೆಯಿಂದ ಮಾತನಾಡಿ.

ಸಂಸ್ಕೃತದಲ್ಲಿ ಮಾತನಾಡುವುದು ಒಂದು ಸಂಸ್ಕಾರವಾದರೆ ನಿತ್ಯ ಜೀವನದಲ್ಲಿ ಶಿಷ್ಟಾಚಾರದ ಶ್ಲೋಕಗಳನ್ನು ಬಳಸುವುದು ಇನ್ನೊಂದು ಸಂಸ್ಕಾರ. ಇವೆರಡನ್ನೂ ಒಳಗೊಂಡ ಪುಸ್ತಕವೇ **'ಸಂಸ್ಕಾರಬಿಂದು'**. ಇದನ್ನು ತಮ್ಮ ಕರಕಮಲದಲ್ಲಿಡಲು ನಾವು ಹರ್ಷಿಸುತ್ತೇವೆ. ಇದನ್ನು ಸಿದ್ಧಪಡಿಸುವಲ್ಲಿ ಸಹಕರಿಸಿದ ಎಲ್ಲರಿಗೂ, ಆರ್ಥಿಕ ನೆರವು ನೀಡಿದ ಮಹನೀಯರಿಗೂ ಅನಂತಾನಂತ ವಂದನೆಗಳು.

ಚಿತ್ರಭಾನು ಸಂ|| ಶ್ರಾವಣಪೂರ್ಣಿಮಾ - ಪ್ರಕಾಶಕಃ
22.8.02

ಈ ಪುಸ್ತಕದ ಮಾರಾಟದಿಂದ ಬಂದ ಹಣವನ್ನು ಕರ್ನಾಟಕ ಹಾಗೂ ದೆಹಲಿಯಲ್ಲಿ ನಿರ್ಮಾಣಗೊಳ್ಳಲಿರುವ ಭವನಕ್ಕಾಗಿ ಉಪಯೋಗಿಸಿಕೊಳ್ಳಲಾಗುವುದು.

॥ ಓಂ ॥

# ೧. ವ್ಯವಹಾರ ವಾಕ್ಯಗಳು

| | |
|---|---|
| ನಮಸ್ತೇ / ನಮಸ್ಕಾರಾಃ । | ನಮಸ್ಕಾರ. |
| ಪ್ರಣಾಮಾಃ । | ವಂದನೆಗಳು. |
| ಧನ್ಯವಾದಃ । | ಧನ್ಯವಾದ. |
| ಸ್ವಾಗತಮ್ । | ಸ್ವಾಗತ. |
| ಕ್ಷಮ್ಯತಾಮ್ । | ಕ್ಷಮಿಸಿ. |
| ಚಿಂತಾ ಮಾಸ್ತು । | ಪರವಾ ಇಲ್ಲ. |
| ಕೃಪಯಾ । | ದಯವಿಟ್ಟು. |
| ಪುನಃ ಮಿಲಾಮಃ । | ಮತ್ತೆ ಸಿಗೋಣ. |
| ಅಸ್ತು । | ಆಗಲಿ. / ಸರಿ. |
| ಶ್ರೀಮನ್ / ಮಾನ್ಯವರ | ಸ್ವಾಮೀ. |
| ಮಾನ್ಯೇ / ಆರ್ಯೇ | ಮಾನ್ಯೇ. |
| ಉತ್ತಮಮ್ / ಶೋಭನಮ್ | ಒಳ್ಳೆಯದು. |
| ಬಹು ಉತ್ತಮಮ್ । | ತುಂಬಾ ಒಳ್ಳೆಯದು. |
| ಭವತಃ ನಾಮ ಕಿಮ್ ? | ತಮ್ಮ ಹೆಸರು ? (ಪು) |
| ಭವತ್ಯಾಃ ನಾಮ ಕಿಮ್ ? | ತಮ್ಮ ಹೆಸರು ? (ಸ್ತ್ರೀ) |
| ಮಮ ನಾಮ '........' । | ನನ್ನ ಹೆಸರು '.......' |

| | |
|---|---|
| ಏಷಃ ಮಮ ಮಿತ್ರಂ '...' | ಇವನು ನನ್ನ ಗೆಳೆಯ '....' |
| ಏಷಾ ಮಮ ಸಖೀ '...' | ಇವಳು ನನ್ನ ಗೆಳತಿ '....' |
| ಭವಾನ್ / ಭವತೀ ಕಸ್ಯಾಂ ಕಕ್ಷ್ಯಾಯಾಂ ಪಠತಿ ? | ನೀನು ಯಾವ ತರಗತಿಯಲ್ಲಿ ಓದುತ್ತಿದ್ದೀಯೇ ? |
| ಅಹಂ ಪಂಚಮ-ಕಕ್ಷ್ಯಾಯಾಂ ಪಠಾಮಿ । | ನಾನು ಐದನೇ ತರಗತಿಯಲ್ಲಿ ಓದುತ್ತಿದ್ದೇನೆ. |
| ಭವತಃ ಗ್ರಾಮಃ ? | ತಮ್ಮ ಊರು ? |
| ಭವಾನ್ ಕುತ್ರತ್ಯಃ ? | ತಾವು ಎಲ್ಲಿಯವರು ? |
| ಅಹಂ '.....' ಗ್ರಾಮಸ್ಯ ನಿವಾಸೀ ಅಸ್ಮಿ । | ನಾನು '.....' ಗ್ರಾಮದಲ್ಲಿ ವಾಸಿಸುತ್ತೇನೆ. |
| ಭವಾನ್ ಕುತಃ ಆಗಚ್ಛತಿ ? | ಎಲ್ಲಿಂದ ಬರುತ್ತಿದ್ದೀರಿ ? |
| ವಿದ್ಯಾಲಯತಃ<br>ಗೃಹತಃ<br>....ತಃ<br>ಆಗಚ್ಛಾಮಿ । | ಶಾಲೆಯಿಂದ<br>ಮನೆಯಿಂದ<br>......ಇಂದ<br>ಬರುತ್ತಿದ್ದೇನೆ. |
| ಭವಾನ್ ಕುತ್ರ ಗಚ್ಛತಿ ? | ಎಲ್ಲಿಗೆ ಹೊರಟಿದ್ದು ? |
| ದೇವಾಲಯಂ ಗಚ್ಛಾಮಿ । | ದೇವಸ್ಥಾನಕ್ಕೆ ಹೊರಟಿದ್ದೇನೆ. |

| | | |
|---|---|---|
| ಕಾರ್ಯಾಲಯಂ | - | ಕಾರ್ಯಾಲಯಕ್ಕೆ |
| ಗೃಹಂ | - | ಮನೆಗೆ |
| ವಿತ್ತಕೋಷಂ | - | ಬ್ಯಾಂಕಿಗೆ |

| | |
|---|---|
| ಸ್ವಲ್ಪಮ್ | ಸ್ವಲ್ಪ. |
| ಅಹಂ ನ ಜಾನಾಮಿ । | ನನಗೆ ಗೊತ್ತಿಲ್ಲ. |
| ಕಿಮರ್ಥಂ ನ ಭವತಿ ? | ಯಾಕೆ ಆಗುವುದಿಲ್ಲ? |
| ಅಥ ಕಿಮ್ ? | ಮತ್ತೇನು ? |
| ನೈವ ಖಲು ! | ಇಲ್ವಲ್ಲ ! |
| ಆಗಚ್ಛತು । | ಬಾ / ಬನ್ನಿ. |
| ಉಪವಿಶತು । | ಕುಳಿತುಕೊಳ್ಳಿ. |
| ಜ್ಞಾತಮ್ । | ತಿಳಿಯಿತು. |
| ಕಥಮ್ ಆಸೀತ್ ? | ಹೇಗಿತ್ತು ? |
| ಕಾರ್ಯಕ್ರಮಃ ಕದಾ ? | ಕಾರ್ಯಕ್ರಮ ಎಂದು ? |
| ಅದ್ಯ ಏವ ಕಿಮ್ ? | ಈ ದಿನವೇ ಏನು ? |
| ಅದ್ಯ ನ, ಶ್ವಃ । | ಇಂದಲ್ಲ, ನಾಳೆ. |
| ತದ್ ಹ್ಯಃ ಏವ ಸಮಾಪ್ತಮ್ । | ಅದು ನಿನ್ನೆಯೇ ಮುಗಿಯಿತು. |
| ಇದಾನೀಮ್ ಏವ । | ಈಗಲೇ. |
| ಆಮ್, ಇದಾನೀಮ್ । | ಹೌದು, ಈಗ. |
| ಪ್ರಾಪ್ತಂ ಕಿಮ್ ? | ಸಿಕ್ಕಿತೇನು ? |
| ಕಸ್ಮಿನ್ ಸಮಯೇ ? | ಯಾವಾಗ ? |
| ಪಂಚವಾದನೇ । | ಐದುಗಂಟೆಗೆ. |
| ಆವಶ್ಯಕಂ ನ ಆಸೀತ್ । | ಬೇಕಾಗಿರಲಿಲ್ಲ. |

| | |
|---|---|
| ಮಹಾನ್ ಆನಂದಃ । | ಬಹಳ ಸಂತೋಷ. |
| ಪ್ರಯತ್ನಂ ಕರೋಮಿ । | ಪ್ರಯತ್ನಿಸುತ್ತೇನೆ. |
| ನ ಶಕ್ಯತೇ ಭೋಃ । | ಆಗುವುದಿಲ್ಲವಯ್ಯ. |
| ತಥಾ ನ ವದತು । | ಹಾಗೆ ಹೇಳಬೇಡಿ. |
| ಭವಾನ್ ಕದಾ ದದಾತಿ ? | ಯಾವಾಗ ಕೊಡುತ್ತೀರಿ ? |
| ಅಹಂ ಕಿಂ ಕರೋಮಿ ? | ನಾನೇನು ಮಾಡಲಿ ? |
| ಕತಿ ಜನಾಃ ಸಂತಿ ? | ಎಷ್ಟು ಜನರಿದ್ದಾರೆ ? |
| ಪುನಃ ಆಗಚ್ಛತು । | ಮತ್ತೊಮ್ಮೆ ಬನ್ನಿ. |
| ಅವಶ್ಯಮ್ ಆಗಚ್ಛಾಮಿ । | ಖಂಡಿತ ಬರುತ್ತೇನೆ. |
| ಭವಾನ್ ಕಥಮ್ ಅಸ್ತಿ ? | ನೀವು ಹೇಗಿದ್ದೀರಿ ? |
| ಗೃಹೇ ಸರ್ವಂ ಕುಶಲಂ ಕಿಮ್ ? | ಮನೆಯಲ್ಲಿ ಎಲ್ಲ ಕ್ಷೇಮವಷ್ಟೇ ? |
| ಆಂ, ಸರ್ವಂ ಕುಶಲಮ್ । | ಹೌದು, ಎಲ್ಲ ಕ್ಷೇಮ. |
| ಕಾ ವಾರ್ತಾ ? | ಮತ್ತೇನು ಸುದ್ದಿ ? |
| ಭವಾನ್ ಏವ ವದತು । | ನೀವೇ ಹೇಳಿ. |
| ಕಿಂ, ಮೇಲನಂ ವಿರಲಂ ಜಾತಮ್ ? | ಏನು, ಭೇಟಿಯೇ ಅಪರೂಪವಾಯ್ತು ? |
| ಆಗಚ್ಛತು, ಉಪವಿಶತು । | ಬನ್ನಿ, ಕುಳಿತುಕೊಳ್ಳಿ. |
| ಜಲಮ್ ಆನಯಾಮಿ ? | ನೀರು ತರಲೇ ? |
| ಮಾಸ್ತು । | ಬೇಡ. |

| | |
|---|---|
| ಕಥಮ್ ಆಗಮನಮ್ ? ಅಭವತ್ ? | ಹೇಗ ಬರೋಣವಾಯಿತು ? |
| ಮಾರ್ಗಃ ವಿಸ್ಮೃತಃ ಕಿಮ್ ? | ದಾರಿ ಮರತುಹೋಯಿತೇನು ? |
| ಚಾಯಂ ಪಿಬತಿ ಕಿಮ್ ? | ಚಹ ಕುಡಿಯುತ್ತೀರಾ ? |
| ನೈವ, ಇದಾನೀಮೇವ ಪೀತ್ವಾ ಆಗಚ್ಛಾಮಿ । | ಇಲ್ಲಪ್ಪ, ಈಗಷ್ಟೇ ಕುಡಿದು ಬರುತ್ತಿದ್ದೇನೆ. |
| ಶೈತ್ಯಮ್ ಅಸ್ತಿ, ಸ್ವಲ್ಪಂ ಚಾಯಂ ಭವತು । | ಛಳಿ ಇದೆ, ಸ್ವಲ್ಪ ಚಹಾ ಇರಲಿ. |
| ಭವತು ನಾಮ । | ಆಗಲಿ ಬಿಡಿ. |
| ಇದಾನೀಂ ಮಯಾ ಗಂತವ್ಯಮ್ । | ಈಗ ನಾನು ಹೋಗಬೇಕು. |
| ತಿಷ್ಠತು, ಭೋಜನಂ ಕೃತ್ವಾ ಗಚ್ಛತು । | ನಿಲ್ಲಿ, ಊಟ ಮಾಡಿಕೊಂಡು ಹೋಗಿ. |
| ನ, ಇದಾನೀಂ ಭೋಜನಂ ನ ಕರೋಮಿ । | ಇಲ್ಲ, ಈಗ ನಾನು ಊಟ ಮಾಡುವುದಿಲ್ಲ. |
| ಇದಾನೀಂ ಭೋಜನಸ್ಯ ಸಮಯಃ ನ । | ಈಗ ಊಟದ ಸಮಯ ಅಲ್ಲ. |
| ನ, ಪುನಃ ಕದಾಚಿತ್ ಖಾದಾಮಿ । | ಬೇಡ, ಮತ್ತೆ ಯಾವಾಗ-ಲಾದರೂ ತಿನ್ನುತ್ತೇನೆ. |
| ಪುನಃ ಕದಾ ಮೇಲನಮ್ ? | ಮತ್ತೆ ಯಾವಾಗ ಭೇಟಿ ? |

| | |
|---|---|
| ಭವಾನ್ ಕಿಂ ಕರೋತಿ ? | ನೀನೇನು ಮಾಡುತ್ತೀಯಾ ? |
| ಅಹಮ್ 'ಆಚಾರ್ಯಃ' (ಶಿಕ್ಷಕಃ) ಅಸ್ಮಿ । | ನಾನು ಶಿಕ್ಷಕನಿದ್ದೇನೆ. |
| ಅಹಮ್ 'ಯಂತ್ರಾಗಾರೇ' ಕಾರ್ಯಂ ಕರೋಮಿ । | ನಾನು ಕಾರ್ಖಾನೆಯಲ್ಲಿ ಕೆಲಸ ಮಾಡುತ್ತೇನೆ. |

| | | |
|---|---|---|
| ಕಾರ್ಯಾಲಯೇ | - | ಆಫೀಸಿನಲ್ಲಿ |
| ನ್ಯಾಯಾಲಯೇ | - | ಕೋರ್ಟಿನಲ್ಲಿ |
| ವಿತ್ತಕೋಷೇ | - | ಬ್ಯಾಂಕಿನಲ್ಲಿ |
| ಆಪಣೇ | - | ಅಂಗಡಿಯಲ್ಲಿ |

| | |
|---|---|
| ಕೃಪಯಾ ಪುಸ್ತಕಂ ದದಾತು । | ದಯವಿಟ್ಟು ಪುಸ್ತಕವನ್ನು ಕೊಡಿ. |
| ರಾಕೇಶಃ ಅಸ್ತಿ ಕಿಮ್ ? | ರಾಕೇಶನು ಇದ್ದಾನೆಯೇ ? |
| ಮಮ ವಚನಂ ಶೃಣೋತು । | ನನ್ನ ಮಾತನ್ನು ಕೇಳು. |
| ಭವತಃ ಕಾ ಹಾನಿಃ ? | ನಿನಗೇನು ನಷ್ಟ ? |
| ಕಿಮರ್ಥಮ್ ಏತಾವಾನ್ ವಿಲಂಬಃ ? | ಯಾಕಿಷ್ಟು ಲೇಟು ? |
| ಕಿಮಪಿ ನ ಭವತಿ । | ಏನೂ ಆಗುವುದಿಲ್ಲ. |
| ಸ್ವೀಕರೋತು । | ತೆಗೆದುಕೋ. |
| ಭೋಜನಂ ಸಿದ್ಧಮ್ । | ಊಟ ತಯಾರಿದೆ. |

| | |
|---|---|
| ಪರ್ಯಾಪ್ತಮ್ । | ಸಾಕು. |
| ಸ್ವಲ್ಪಂ ಪರಿವೇಷಯತು । | ಸ್ವಲ್ಪ ಬಡಿಸು. |
| ಭೋಜನಂ ಬಹು ಸ್ವಾದಿಷ್ಟಮ್ ಅಸ್ತಿ । | ಊಟ ತುಂಬ ರುಚಿಯಾಗಿದೆ. |

| | |
|---|---|
| ಅನ್ನಂ - ಅನ್ನ | ಕ್ಷೀರಂ - ಹಾಲು |
| ಲವಣಂ - ಉಪ್ಪು | ತೇಮನಂ - ಮಜ್ಜಿಗಹುಳಿ |
| ಸಾರ - ಸಾರು | ವ್ಯಂಜನಂ - ಪಲ್ಯ |
| ಅವಲೇಹಃ - ಉಪ್ಪಿನಕಾಯಿ | ಪರ್ಪಟಃ - ಹಪ್ಪಳ |
| ಕ್ವಥಿತಂ - ಸಾಂಬಾರ್ | ರೋಟಿಕಾ - ರೊಟ್ಟಿ |
| ತಕ್ರಂ - ಮಜ್ಜಿಗ | ಚಿತ್ರಾನ್ನಂ - ಚಿತ್ರಾನ್ನ |
| ಸರ್ಪಿಃ - ತುಪ್ಪ | ಮಿಷ್ಟಭಕ್ಷ್ಯಂ - ಸಿಹಿಭಕ್ಷ್ಯ |

| | |
|---|---|
| ಸ್ವಾಸ್ಥ್ಯಂ ಕಥಮ್ ಅಸ್ತಿ ? | ಆರೋಗ್ಯ ಹೇಗಿದ ? |
| ಸಮೀಚೀನಂ ನಾಸ್ತಿ । | ಚೆನ್ನಾಗಿಲ್ಲ. |
| ಕಿಮ್ ಅಭವತ್ ? | ಏನಾಯಿತು ? |
| ಜ್ವರ, ಕಾಸಃ, ಶಿರೋವೇದನಾ ಚ । | ಜ್ವರ, ಕೆಮ್ಮು ಮತ್ತು ತಲೆನೋವು. |
| ವೈದ್ಯಾಯ ದರ್ಶಯತು । | ವೈದ್ಯ(ಡಾಕ್ಟರ್)ರಿಗ ತೋರಿಸು. |

| | |
|---|---|
| ಅಹಂ ಔಷಧಂ ಸ್ವೀಕೃತವಾನ್ । | ಔಷಧವನ್ನು ತೆಗೆದುಕೊಂಡಿದ್ದೇನೆ. |
| ತತ್ರ ಸಮ್ಯಕ್ ಪಶ್ಯತು । | ಅಲ್ಲಿ ಸರಿಯಾಗಿ ನೋಡು. |
| ಸಾ ಕಿಂ ಪೃಚ್ಛತಿ ? | ಅವಳೇನು ಕೇಳುತ್ತಾಳೆ ? |
| ಅಹಂ ಭವಂತಂ ನ ತ್ಯಜಾಮಿ । | ನಾನು ನಿನ್ನನ್ನು ಬಿಡುವುದಿಲ್ಲ. |
| ಫಲಂ ತು ಖಾದತು । | ಹಣ್ಣನ್ನಾದರೂ ತಿನ್ನು. |
| ತಿಷ್ಠತು, ಇದಾನೀಮೇವ ದದಾಮಿ । | ನಿಲ್ಲು, ಈಗಲೇ. ಕೊಡುತ್ತೇನೆ. |
| ಸಮ್ಯಕ್ ಸ್ಥಾಪಯತು, ನೋ ಚೇತ್ ಪತತಿ । | ಸರಿಯಾಗಿ ಇಡು, ಇಲ್ಲದಿದ್ದರೆ ಬೀಳುತ್ತದೆ. |
| ಅಹಂ ಪುಸ್ತಕಂ ವಿದ್ಯಾಲಯಂ ನಯಾಮಿ । | ನಾನು ಪುಸ್ತಕವನ್ನು ಶಾಲೆಗೆ ಕೊಂಡೊಯ್ಯುತ್ತೇನೆ. |
| ಸಃ ಸಂಸ್ಕೃತವಾರ್ತಾಂ ಶೃಣೋತಿ । | ಅವನು ಸಂಸ್ಕೃತ ವಾರ್ತೆಯನ್ನು ಕೇಳುತ್ತಾನೆ. |
| ಅಹಂ ತಂ ಪ್ರೇಷಯಿಷ್ಯಾಮಿ । | ನಾನು ಅವನನ್ನು ಕಳುಹಿಸುವೆನು. |
| ಮಾತಾ ವಸ್ತ್ರಂ ಪ್ರಕ್ಷಾಲಯತಿ । | ತಾಯಿಯು ಬಟ್ಟೆಯನ್ನು ಒಗೆಯುತ್ತಾಳೆ. |

ಭವಾನ್ ಪ್ರಾತಃ ಕದಾ ಉತ್ತಿಷ್ಠತಿ ? — ನೀನು ಬೆಳಿಗ್ಗೆ ಯಾವಾಗ ಏಳುತ್ತೀಯಾ ?

ಭವತಃ ನಾಮ ನ ಸ್ಮರಾಮಿ । — ನಿನ್ನ ಹೆಸರು ನೆನಪಾಗುತ್ತಿಲ್ಲ.

| | |
|---|---|
| ಪಿತಾ / ಜನಕಃ - ತಂದೆ | ಮಾತಾ / ಜನನೀ - ತಾಯಿ |
| ಅಗ್ರಜಃ - ಅಣ್ಣ | ಅಗ್ರಜಾ - ಅಕ್ಕ |
| ಅನುಜಃ - ತಮ್ಮ | ಅನುಜಾ - ತಂಗಿ |
| ಪಿತೃವ್ಯಃ - ಚಿಕ್ಕಪ್ಪ | ಪಿತೃವ್ಯಾ - ಚಿಕ್ಕಮ್ಮ |
| ಜಾಮಾತಾ - ಅಳಿಯ | ಸ್ನುಷಾ - ಸೊಸೆ |
| ಮಾತುಲಃ - ಸೋದರಮಾವ | ಮಾತುಲಾನೀ - ಸೋದರತ್ತೆ |
| ಶ್ವಶ್ರೂಃ - ಅತ್ತೆ (ಹೆಂಡತಿಯ / ಗಂಡನ ತಾಯಿ) | |
| ಶ್ವಶುರಃ - ಮಾವ (ಹೆಂಡತಿಯ / ಗಂಡನ ತಂದೆ) | |
| ದೇವರಃ - ಮೈದುನ (ಗಂಡನ ತಮ್ಮ) | |
| ಶ್ಯಾಲಃ - ಭಾವಮೈದುನ (ಹೆಂಡತಿಯ ತಮ್ಮ) | |

ಕಿಂಚಿತ್ಕಾಲಂ ಸ್ಯೂತಂ ಗೃಹ್ಣಾತು । — ಸ್ವಲ್ಪ ಕಾಲ ಚೀಲವನ್ನು ಹಿಡಿದುಕೋ.

ಕಿಮರ್ಥಂ ಭವತೀ ರೋದಿತಿ ? — ನೀನು (ಸ್ತ್ರೀ) ಏಕೆ ಅಳುತ್ತೀಯೇ ?

| | |
|---|---|
| ಸಃ ಮಿಷ್ಟಾನ್ನಂ ಬಹು ಇಚ್ಛತಿ । | ಅವನು ಸಿಹಿಯನ್ನು ತುಂಬ ಇಷ್ಟಪಡುತ್ತಾನೆ. |

| | |
|---|---|
| ತೈಲಮ್ - ಎಣ್ಣೆ | ಗೋಧೂಮಃ - ಗೋಧಿ |
| ತಂಡುಲಃ - ಅಕ್ಕಿ | ಯವಃ - ಜೋಳ |
| ಚಣಕಃ - ಕಡಲೆ | ಮುದ್ಗಃ - ಹೆಸರು |
| ತಿಲಃ - ಎಳ್ಳು | ಆಢಕೀ - ತೊಗರಿಬೇಳೆ |
| ಸರ್ಷಪಃ - ಸಾಸಿವೆ | ಸ್ಥಾಲಿಕಾ - ತಟ್ಟೆ |
| ಚೂರ್ಣಮ್ - ಪುಡಿ | ಚಮಸಃ - ಚಮಚ |

| | |
|---|---|
| ಸಾ ತದ್ ಕಾರ್ಯಂ ಕರ್ತುಂ ನ ಶಕ್ನೋತಿ । | ಅವಳಿಗೆ ಆ ಕೆಲಸವನ್ನು ಮಾಡಲು ಸಾಧ್ಯವಿಲ್ಲ. |
| ಅತಿಥಿಃ ಆಗತವಾನ್, ಪಿತರಮ್ ಆಹ್ವಯತು । | ಅತಿಥಿಯು ಬಂದಿದ್ದಾನೆ, ತಂದೆಯನ್ನು ಕರೆ. |
| ಕಿಂ ಕರ್ತುಂ ಶಕ್ಯತೇ ? | ಏನು ಮಾಡಲು ಸಾಧ್ಯ ? |
| ಕುತ್ರಾಪಿ ನ ದೃಶ್ಯತೇ ಖಲು ? | ಎಲ್ಲಿಯೂ ಕಾಣುವುದಿಲ್ಲವಲ್ಲ. |
| ಕಿಮ್ ಅಹಮ್ ಅಂತಃ ಆಗಂತುಂ ಶಕ್ನೋಮಿ ? | ನಾನು ಒಳಗೆ ಬರಬಹುದೇ ? |
| ತದ್ ಕಿಮ್ ಇತಿ ಅಹಂ ಜ್ಞಾತುಮ್ ಇಚ್ಛಾಮಿ । | ಅದೇನೆಂದು ನಾನು ತಿಳಿಯಬಯಸುತ್ತೇನೆ. |

| | |
|---|---|
| ಭವಾನ್ ಉಕ್ತವಾನ್ ಯತ್ ತದ್ ಮಮ ಸಮೀಪೇ ನಾಸ್ತಿ ಇತಿ । | ಅದು ನನ್ನ ಹತ್ತಿರ ಇಲ್ಲ ಎಂದು ನೀನು ಹೇಳಿದ. |
| ಪೂರ್ವಮೇವ ವಕ್ತವ್ಯಮ್ ಆಸೀತ್ । | ಮೊದಲೇ ಹೇಳಬೇಕಾಗಿತ್ತು. |
| ಮಯಾ ನ ದಾತವ್ಯಮ್ ಆಸೀತ್ । | ನಾನು ಕೊಡಬಾರದಿತ್ತು. |
| ಯದಿ ಇಚ್ಛತಿ ತರ್ಹಿ ಸ್ವೀಕರೋಮಿ । | ನೀನು ಇಷ್ಟಪಟ್ಟರೆ ತಗೆದುಕೊಳ್ಳುತ್ತೇನೆ. |
| ಯದಿ ಸಮಯಃ ಅಸ್ತಿ ತರ್ಹಿ ಕೃಪಯಾ ಆಗಚ್ಛತು ಮಯಾ ಸಹ । | ವೇಳೆ ಇದ್ದರೆ ದಯವಿಟ್ಟು ನನ್ನೊಡನೆ ಬಾ. |
| ಯಥಾ ಭವಾನ್ ಆದಿಶತಿ ತಥಾ ಕರೋಮಿ । | ನೀನು ಹೇಗೆ ಹೇಳುತ್ತೀಯೋ ಹಾಗೆ ಮಾಡುತ್ತೇನೆ. |
| ಪಶ್ಯಾಮಿ ಕಿಂ ಸಾಧ್ಯಮ್ ಇತಿ । | ನೋಡುತ್ತೇನೆ ಏನಾಗುವುದು ಎಂದು. |
| ಯದಾ ಸಃ ಆಗಮಿಷ್ಯತಿ ತದಾ ಸೂಚಯಿಷ್ಯಾಮಿ । | ಯಾವಾಗ ಅವನು ಬರುವನೋ ಆವಾಗ ಸೂಚಿಸುವೆನು. |

ದರ್ಪಣಃ - ಕನ್ನಡಿ
ಕಂಕತಿಕಾ - ಬಾಚಣಿಗೆ
ಫೇನಕಮ್ - ಸಾಬೂನು
ಸ್ನಾನಫೇನಕಮ್ - ಸ್ನಾನದ ಸಾಬೂನು
ವಸ್ತ್ರಫೇನಕಮ್ ಬಟ್ಟೆ ಸಾಬೂನು
ಕೂರ್ಚಃ - ಬ್ರಷ್
ದಂತಫೇನಃ - ಟೂತ್‌ಪೇಸ್ಟ್
ದಂತಕೂರ್ಚಃ - ಹಲ್ಲುಜ್ಜುವ ಬ್ರಷ್
ಪಾದರಕ್ಷಾ ಚಪ್ಪಲಿ
ಪಾದತ್ರಾಣಮ್ ಶೂ
ಶಾಟಿಕಾ ಸೀರೆ
ಯುತಕಮ್ - ಅಂಗಿ
ಕರವಸ್ತ್ರಮ್ - ಕರವಸ್ತ್ರ
ಶಿರಸ್ತ್ರಮ್ - ಟೋಪಿ
ಗಲಬಂಧಃ ಟೈ
ಪಾದಕೋಶಃ - ಕಾಲುಚೀಲ

ಲೇಖನೀ - ಪೆನ್ನು
ಅಂಕನೀ - ಪೆನ್ಸಿಲ್
ಪುಸ್ತಿಕಾ - ಚಿಕ್ಕಪುಸ್ತಕ
ಕಾಗದಮ್ - ಕಾಗದ
ಪುನಃಪೂರಣೀ - ರೀಫಿಲ್
ಕ್ಷುರಪತ್ರಮ್ - ಬ್ಲೇಡು
ವಿದ್ಯುದ್ದೀಪಃ - ವಿದ್ಯುದ್‌ದೀಪ
ವ್ಯಜನಮ್ - ಬೀಸಣಿಗೆ .
ಪಿಂಜಃ - ಸ್ವಿಚ್
ದಂಡದೀಪಃ - ಟ್ಯೂಬ್‌ಲೈಟ್
ಆಸಂದಃ - ಕುರ್ಚಿ
ಚೋಲಃ - ಬ್ಲೌಸ್
ಊರುಕಮ್ - ಪ್ಯಾಂಟ್
ರಾಂಕವಮ್ - ಶಾಲು
ಊರ್ಣಿಕಾ - ಮಫ್ಲರ್
ಧೌತವಸ್ತ್ರಮ್ - ಶುಭ್ರವಸ್ತ್ರ

| | |
|---|---|
| ಮೌನಮೇವ ಉಚಿತಮ್ । | ಸುಮ್ಮನಿರುವುದೇ ಸರಿ. |
| ತದ್ವಿಷಯೇ ಅಹಂ ಕಿಮಪಿ ನ ವದಾಮಿ । | ಆ ವಿಷಯದಲ್ಲಿ ನಾನು ಏನೂ ಹೇಳುವುದಿಲ್ಲ. |
| ವಿಚಿಂತ್ಯ ಏವ ವಕ್ತವ್ಯಮ್ । | ಚಿಂತಿಸಿಯೇ ಹೇಳಬೇಕು. |
| ತರ್ಹಿ ಸಮೀಚೀನಮ್ । | ಹಾಗಾದರ ಸರಿ. |
| ಏವಂ ಚೇತ್ ಕಥಮ್ ? | ಹೀಗಾದರ ಹೇಗ ! |
| ಕಿಂಚಿತ್ ಸ್ಮಾರಯತು । | ಸ್ವಲ್ಪ ಜ್ಞಾಪಿಸು. |
| ತಮ್ ಅಹಂ ಸಮ್ಯಕ್ ಜಾನಾಮಿ । | ಅವನು ನನಗ ಚೆನ್ನಾಗಿ ಗೊತ್ತು. |
| ತದಾನೀಮೇವ ಉಕ್ತಂ ಖಲು ? | ಆಗಲೇ ಹೇಳಿಲ್ವೇ ? |
| ಕದಾ ಉಕ್ತಂ ಭೋಃ ? | ಯಾವಾಗಯ್ಯ ಹೇಳಿದೆ ! |
| ಯತ್ ಕಿಮಪಿ ಭವತು । | ಏನು ಬೇಕಾದ್ರೂ ಆಗಲಿ. |
| ಸಃ ಬಹು ಸಮೀಚೀನಃ । | ಅವನು ತುಂಬಾ ಒಳ್ಳೆಯವನು. |
| ಸಃ ಬಹು ರೂಕ್ಷಃ । | ಅವನು ತುಂಬಾ ಒರಟು. |
| ತದ್ವಿಷಯೇ ಚಿಂತಾ ಮಾಸ್ತು । | ಆ ವಿಷಯದಲ್ಲಿ ಚಿಂತೆ ಬೇಡ |

| | |
|---|---|
| ಮಮ ಕೋಽಪಿ ಕ್ಲೇಶಃ ನಾಸ್ತಿ । | ನನಗೇನೂ ತೊಂದರೆಯಿಲ್ಲ. |
| ಏತತ್ ಕಷ್ಟಕರಂ ನ । | ಇದು ಕಷ್ಟವೇನಲ್ಲ. |
| ಭೋಃ, ಕಿಮ್ ಆನೀತವಾನ್ ? | ಏನ ತಂದಿದ್ದೀಯಯ್ಯಾ ? |
| ಭವಂತಂ ಕಃ ಉಕ್ತವಾನ್ ? | ನಿನಗೆ ಯಾರು ಹೇಳಿದ್ದು ? |
| ಕಿಂಚಿದನಂತರಮ್ ಆಗಚ್ಛೇತ್ । | ಸ್ವಲ್ಪ ಸಮಯದ ನಂತರ ಬರಬಹುದು. |
| ಪ್ರಾಯಃ ತಥಾ ನ ಸ್ಯಾತ್ । | ಬಹುಶಃ ಹಾಗಿರಲಾರದು. |
| ಮಾಸ್ತು, ಶ್ವಃ ದದಾತು । | ಪರವಾಗಿಲ್ಲ, ನಾಳೆ ಕೊಡಿ. |
| ಅಹಂ ಪುನಃ ಸೂಚಯಾಮಿ । | ನಾನು ಮತ್ತೆ ತಿಳಿಸುತ್ತೇನೆ. |
| ಅದ್ಯ ಆಸೀತ್ ಕಿಮ್ ? | ಇವತ್ತು ಇತ್ತಾ ? |
| ಅವಶ್ಯಮ್ ಆಗಚ್ಛಾಮಿ । | ಖಂಡಿತ ಬರ್ತೀನಿ. |
| ಕಿಂ ನಾಗರಾಜಃ ಅಸ್ತಿ ? | ನಾಗರಾಜ ಇದ್ದಾನಾ ? |
| ಕಿಮರ್ಥಮ್ ಏವಂ ಜಾತಮ್ ? | ಏತಕ್ಕೆ ಹೀಗಾಯ್ತು ? |
| ಕಿಂ ತತ್ರ ಆಸೀತ್ ? | ಅಲ್ಲಿ ಇತ್ತಾ ? |
| ಏತತ್ ಸತ್ಯಂ ಖಲು ? | ಇದು ನಿಜ ತಾನೇ ? |

| | |
|---|---|
| ಕಿಮಪಿ ಉಕ್ತವಾನ್ ಕಿಮ್ ? | ಏನಾದರೂ ಹೇಳಿದಾರಾ ? |
| ಕುತಃ ಆನೀತವಾನ್ ಭವಾನ್ ? | ಎಲ್ಲಿಂದ ತಂದದ್ದು ? |
| ಅನ್ಯತ್ ಕಿಮಪಿ ಕಾರ್ಯಂ ನಾಸ್ತಿ । | ಬೇರೇನೂ ಕೆಲಸವಿಲ್ಲ. |
| ಮಮ ವಚನಂ ಶೃಣೋತು । | ನನ್ನ ಮಾತು ಸ್ವಲ್ಪ ಕೇಳು. |
| ತದ್ ಅಹಮ್ ಅಪಿ ಜಾನಾಮಿ । | ಅದು ನಂಗೂ ಗೊತ್ತು. |
| ತಾವದ್ ಆವಶ್ಯಕಂ ನ । | ಅಷ್ಟೇನೂ ಬೇಕಾದದ್ದಲ್ಲ. |
| ಭವತಃ ಕಾ ಹಾನಿಃ ? | ನಿಮಗೇನು ಹಾನಿ ? |
| ಕಿಮರ್ಥಮ್ ಏತಾವಾನ್ ವಿಲಂಬಃ ? | ಯಾಕೆ ಇಷ್ಟು ಹೊತ್ತು ? |
| ಯಥೇಷ್ಟಮ್ ಅಸ್ತಿ । | ಯಥೇಷ್ಟವಾಗಿದೆ. |
| ಭವತಃ ಅಭಿಪ್ರಾಯಃ ಕಃ ? | ನಿಮ್ಮ ಅಭಿಪ್ರಾಯ ಏನು ? |
| ತಸ್ಯ ಕಿಂ ಕಾರಣಮ್ ? | ಅದಕ್ಕೆ ಏನು ಕಾರಣ ? |
| ಸ್ವಯಮೇವ ಕರೋತಿ ಕಿಮ್ ? | ಸ್ವತಃ ಮಾಡ್ತೀಯಾ ? |

## ೨. ಶುಭಾಶಯಾಃ

ನವವರ್ಷಸ್ಯ ಶುಭಾಶಯಾಃ ।

- ಹೊಸವರ್ಷದ ಶುಭಾಶಯಗಳು.

ನವವರ್ಷಂ ನವೋತ್ಸಾಹಂ ದದಾತು ।

- ಹೊಸವರ್ಷ ಹೊಸ ಉತ್ಸಾಹವನ್ನು ಕೊಡಲಿ.

ನವವರ್ಷಂ ನವಹರ್ಷಮ್ ಆನಯತು ।

- ಹೊಸವರ್ಷ ಹೊಸಹರುಷವನ್ನು ತರಲಿ.

ಯುಗಾದಿಶುಭಾಶಯಾಃ - ಯುಗಾದಿಯ ಶುಭಾಶಯಗಳು.

ದೀಪಾವಲೀಶುಭಾಶಯಾಃ - ದೀಪಾವಳೀ ಶುಭಾಶಯಗಳು.

ವೈವಾಹಿಕಜೀವನಂ ಶುಭಮಯಂ ಭವತು ।

ವಿವಾಹಜೀವನವು ಶುಭಮಯವಾಗಲಿ.

ಸಫಲತಾಯೈ ಅಭಿನಂದನಮ್ ।

- ಪಾಸಾದುದಕ್ಕೆ (ಇತ್ಯಾದಿ) ಅಭಿನಂದನಗಳು.

ಕಾರ್ಯಕ್ರಮಃ ಯಶಸ್ವೀ ಭವತು ।

- ಕಾರ್ಯಕ್ರಮ ಯಶಸ್ವಿಯಾಗಲಿ.

ಶತಂ ಜೀವ ಶರದೋ ವರ್ಧಮಾನಃ

- ನೂರು ಕಾಲ ಬಾಳಿ ಬೆಳಗು.

ಜನ್ಮದಿನಸ್ಯ ಶುಭಾಶಯಾಃ । - ಹುಟ್ಟುಹಬ್ಬದ ಶುಭಾಶಯಗಳು.

ಶಿವಾಃ ತೇ ಪಂಥಾನಃ । ಪ್ರಯಾಣವು ಶುಭಕರವಾಗಲಿ.



## ೩. ಶಾಂತಿಮಂತ್ರ

ಓಂ ಸಹನಾವವತು । ಸಹನೌ ಭುನಕ್ತು ।
ಸಹ ವೀರ್ಯಂ ಕರವಾವಹೈ ।
ತೇಜಸ್ವಿನಾವಧೀತಮಸ್ತು । ಮಾ ವಿದ್ವಿಷಾವಹೈ ॥
ಓಂ ಶಾಂತಿಃ ಶಾಂತಿಃ ಶಾಂತಿಃ ।

ಓಂ (ಪರಬ್ರಹ್ಮವು ಗುರುಶಿಷ್ಯರಾದ) ನಮ್ಮಿಬ್ಬರನ್ನು ಜೊತೆಯಲ್ಲಿ ರಕ್ಷಿಸಲಿ. ನಮ್ಮಿಬ್ಬರನ್ನು ಜೊತೆಯಲ್ಲಿ ಪೋಷಿಸಲಿ. ಜೊತೆಯಲ್ಲಿಯೇ ನಾವು ವೀರ್ಯವತ್ತಾದ ಕಾರ್ಯವನ್ನು ಮಾಡುವಂತಾಗಲಿ. ನಮ್ಮಿಬ್ಬರ ಅಧ್ಯಯನವು ತೇಜಸ್ವಿಯಾಗಲಿ, ನಾವು ದ್ವೇಷಿಸದೇ ಇರುವಂತಾಗಲಿ.
ಓಂ ಶಾಂತಿಃ ಶಾಂತಿಃ ಶಾಂತಿಃ ।

ಓಂ ಅಸತೋ ಮಾ ಸದ್ಗಮಯ
ತಮಸೋ ಮಾ ಜ್ಯೋತಿರ್ಗಮಯ ।
ಮೃತ್ಯೋರ್ಮಾ ಅಮೃತಂ ಗಮಯ
ಓಂ ಶಾಂತಿಃ ಶಾಂತಿಃ ಶಾಂತಿಃ ।

ಅಸತ್ತಿನಿಂದ ಸತ್ತಿಗೆ ನನ್ನನ್ನು ನಡೆಯಿಸು. ಅಂಧಕಾರದಿಂದ ಜ್ಯೋತಿಯತ್ತ ನನ್ನನ್ನು ನಡೆಯಿಸು. ಮೃತ್ಯುವಿನಿಂದ ಅಮೃತತ್ವಕ್ಕೆ ನನ್ನನ್ನು ನಡೆಯಿಸು.
ಓಂ ಶಾಂತಿಃ ಶಾಂತಿಃ ಶಾಂತಿಃ

## ೪. ದಿನಚರಿ

ಬೆಳಿಗ್ಗೆ ಎದ್ದಕೂಡಲೇ ಕೈಗಳನ್ನು ನೋಡಿ -

ಕರಾಗ್ರೇ ವಸತೇ ಲಕ್ಷ್ಮೀಃ ಕರಮಧ್ಯೇ ಸರಸ್ವತೀ ।
ಕರಮೂಲೇ ಸ್ಥಿತಾ ಗೌರೀ ಪ್ರಭಾತೇ ಕರದರ್ಶನಮ್ ॥

ಹಸ್ತದ ಕೊನೆಯಲ್ಲಿ ಲಕ್ಷ್ಮಿ ವಾಸಮಾಡುತ್ತಾಳೆ. ಮಧ್ಯದಲ್ಲಿ ಸರಸ್ವತಿ, ಮೂಲದಲ್ಲಿ ಗೌರಿ ಇವರು ವಾಸಮಾಡುತ್ತಾರೆ. ಆದರಿಂದ ಬೆಳಿಗ್ಗೆ (ಎದ್ದ ತಕ್ಷಣ) ಹಸ್ತವನ್ನು ಮೊದಲು ನೋಡಬೇಕು.

ಹಾಸಿಗೆ ಬಿಟ್ಟು ನೆಲದ ಮೇಲೆ ಕಾಲಿಡುವ ಮೊದಲು -

ಸಮುದ್ರವಸನೇ ದೇವಿ ಪರ್ವತಸ್ತನಮಂಡಲೇ ।
ವಿಷ್ಣುಪತ್ನಿ ನಮಸ್ತುಭ್ಯಂ ಪಾದಸ್ಪರ್ಶಂ ಕ್ಷಮಸ್ವ ಮೇ ॥

ಮಹಾವಿಷ್ಣುವಿನ ಪತ್ನಿಯಾದ ಭೂದೇವಿಯೇ! ಸಮುದ್ರವೇ ನಿನಗೆ ಉಡುವ ಬಟ್ಟೆಗಳು. ಕುಲಪರ್ವತಗಳೇ ನಿನ್ನ ಸ್ತನಗಳು. ನಿನಗೆ ನಮಸ್ಕಾರ. ನನ್ನ ಪಾದಸ್ಪರ್ಶದಿಂದಾದ ಅಪರಾಧವನ್ನು ಮನ್ನಿಸು.

ದೇವದರ್ಶನ -

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥

ಎಲ್ಲ ವಿಘ್ನಗಳ ಶಾಂತಿಗಾಗಿ ಪರಮಾತ್ಮನನ್ನು ಧ್ಯಾನ

ಬೇಕು. ಅವನು ಶುಭ್ರಬಟ್ಟೆಯನ್ನು ಧರಿಸಿ ವ್ಯಾಪಕನಾಗಿ ಚಂದ್ರನ ಕಾಂತಿ ಪಡೆದಿದ್ದಾನೆ. ನಾಲ್ಕು ಕೈಗಳಿಂದ ಶೋಭಿಸುವ ಅವನ ಮುಖವು ಸದಾ ಪ್ರಸನ್ನ.

ಪ್ರಾತಃಸ್ಮರಣೆ -

**ಉತ್ತಿಷ್ಠೋತ್ತಿಷ್ಠ ಗೋವಿಂದ ಉತ್ತಿಷ್ಠ ಗರುಡಧ್ವಜ ।**
**ಉತ್ತಿಷ್ಠ ಕಮಲಾಕಾಂತ ತ್ರೈಲೋಕ್ಯಂ ಮಂಗಲಂ ಕುರು ॥**

ಗೋವಿಂದ ! ಗರುಡಧ್ವಜ ! ಎದ್ದೇಳು. ರಮಾರಮಣ ! ಏಳು. ಮೂರು ಲೋಕಗಳಿಗೂ ಮಂಗಳವನ್ನು ನೀಡು.

**ರತ್ನಾಕರಾಧೌತಪದಾಂ ಹಿಮಾಲಯಕಿರೀಟಿನೀಮ್ ।**
**ಬ್ರಹ್ಮರಾಜರ್ಷಿರತ್ನಾಢ್ಯಾಂ ವಂದೇ ಭಾರತಮಾತರಮ್ ॥**

ಭಾರತಮಾತೆಯೇ! ನಿನಗೆ ನಮಸ್ಕಾರ. ನಿನ್ನ ಕಾಲುಗಳನ್ನು ಸಮುದ್ರರಾಜನು ತೊಳೆಯುತ್ತಿದ್ದಾನೆ. ಹಿಮವಂತನೇ ನಿನ್ನ ಕಿರೀಟ. ಬ್ರಹ್ಮರ್ಷಿರಾಜರ್ಷಿಗಳೇ ನಿನ್ನ ಅನರ್ಘ್ಯರತ್ನಗಳು.

ಸ್ನಾನ ಮಾಡುವಾಗ -

**ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।**
**ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು ॥**

ಗಂಗೆ ಯಮುನೆಯರೇ, ಗೋದಾವರಿಸರಸ್ವತಿಯರೇ, ನರ್ಮದೆಯೇ, ಸಿಂಧೂಕಾವೇರಿಗಳೇ, ನೀವೆಲ್ಲ (ನಾವು ಸ್ನಾನ ಮಾಡುವ) ಈ ನೀರಿನಲ್ಲಿ ನೆಲೆಸಿರಿ.

ದೇವರಿಗೆ ನಮಸ್ಕಾರ -

ಯಾನಿ ಕಾನಿ ಚ ಪಾಪಾನಿ ಜನ್ಮಾಂತರಕೃತಾನಿ ಚ ।
ತಾನಿ ತಾನಿ ವಿನಶ್ಯಂತಿ ಪ್ರದಕ್ಷಿಣಪದೇ ಪದೇ ॥

ಈ ಜನ್ಮದಲ್ಲಾಗಲೀ ಜನ್ಮಾಂತರದಲ್ಲಾಗಲೀ ಮಾಡಿದ ಎಲ್ಲ ಪಾಪಗಳು ದೇವರ ಪ್ರದಕ್ಷಿಣೆಯ ಹೆಜ್ಜೆ ಇಡುವಾಗ ನಾಶವಾಗುತ್ತವೆ.

ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ ।
ತಸ್ಮಾತ್ ಕಾರುಣ್ಯಭಾವೇನ ರಕ್ಷ ಮಾಂ ಜಗದೀಶ್ವರ ॥

ಜಗದೀಶ್ವರ! ಶರಣಾಗತರಕ್ಷಕರು ನನಗೆ ಬೇರಿಲ್ಲ. ನೀನೇ ನನಗೆ ರಕ್ಷಕ. ಆದಕಾರಣ ಕರುಣಾಪೂರಿತ ದೃಷ್ಟಿಯಿಂದ ನನ್ನನ್ನು ಕಾಪಾಡು.

ದೇವಪ್ರಾರ್ಥನೆ -

ಶ್ರದ್ಧಾಂ ಮೇಧಾಂ ಯಶಃ ಪ್ರಜ್ಞಾಂ
ವಿದ್ಯಾಂ ಬುದ್ಧಿಂ ಶ್ರಿಯಂ ಬಲಮ್ ।
ಆಯುಷ್ಯಂ ತೇಜ ಆರೋಗ್ಯಂ
ದೇಹಿ ಮೇ ಪುರುಷೋತ್ತಮ ॥

ಶ್ರದ್ಧೆ, ಸ್ಮರಣಶಕ್ತಿ, ಕೀರ್ತಿ, ವಿಚಾರಶಕ್ತಿ, ವಿದ್ಯೆ, ಬುದ್ಧಿ, ಸಂಪತ್ತು, ಬಲ, ಆಯುಷ್ಯ, ತೇಜಸ್ಸು ಮತ್ತು ಆರೋಗ್ಯಗಳನ್ನು ಪರಮಾತ್ಮ! ನೀನು ನನಗೆ ಅನುಗ್ರಹಿಸು.

ತೀರ್ಥ ಸ್ವೀಕರಿಸುವಾಗ -

ಶರೀರೇ ಜರ್ಜರೀಭೂತೇ
ವ್ಯಾಧಿಗ್ರಸ್ತೇ ಕಲೇವರೇ ।
ಔಷಧಂ ಜಾಹ್ನವೀತೋಯಂ
ವೈದ್ಯೋ ನಾರಾಯಣೋ ಹರಿಃ ॥

ಶರೀರವು ಜರ್ಜರಿತವಾಗಿ ರೋಗಗ್ರಸ್ತವಾದಾಗ, ಗಂಗಾಜಲವೇ ಔಷಧ. ಶ್ರೀಮನ್ನಾರಾಯಣನೇ ವೈದ್ಯ.

ಭೋಜನಕ್ಕೆ ಕುಳಿತುಕೊಂಡಾಗ -

ಅನ್ನಪೂರ್ಣೇ ಸದಾಪೂರ್ಣೇ ಶಂಕರಪ್ರಾಣವಲ್ಲಭೇ ।
ಜ್ಞಾನವೈರಾಗ್ಯಸಿದ್ಧ್ಯರ್ಥಂ ಭಿಕ್ಷಾಂ ದೇಹಿ ಚ ಪಾರ್ವತೀ ॥

ಸದಾ ಪೂರ್ಣಳಾಗಿರುವ ಅನ್ನಪೂರ್ಣೆ ! ಶಿವನ ಪ್ರಾಣಪ್ರಿಯಳಾಗಿರುವ ಹೇ ಪಾರ್ವತಿ ! ಜ್ಞಾನವೈರಾಗ್ಯಗಳು ಸಿದ್ಧಿಸುವಂತೆ ನನಗೆ ಭಿಕ್ಷೆಯನ್ನು ನೀಡು.

ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।
ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ॥

ನಾನು ಜಠರಾಗ್ನಿಸ್ವರೂಪದಿಂದ ಪ್ರಾಣಿಗಳ ಶರೀರದಲ್ಲಿ ಇದ್ದು ಪ್ರಾಣಾಪಾನಗಳ ಸಹಾಯದಿಂದ ಚತುರ್ವಿಧವಾದ ಆಹಾರಗಳನ್ನು ಜೀರ್ಣಿಸುತ್ತೇನೆ.

ಬ್ರಹ್ಮಾರ್ಪಣಂ ಬ್ರಹ್ಮಹವಿಃ
ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್ ॥

ಬ್ರಹ್ಮೈವ ತೇನ ಗಂತವ್ಯಂ
ಬ್ರಹ್ಮಕರ್ಮಸಮಾಧಿನಾ ॥

ಅರ್ಪಣಾಕ್ರಿಯೆ ಬ್ರಹ್ಮ, ಹವಿಸ್ಸು ಬ್ರಹ್ಮ, ಅಗ್ನಿ ಬ್ರಹ್ಮ. ಆಹುತಿಯನ್ನರ್ಪಿಸುವುದೂ, ಆಹುತಿಯನ್ನು ತೆಗೆದು ಕೊಳ್ಳುವುದೂ ಬ್ರಹ್ಮ. ಹೀಗೆ ಎಲ್ಲವೂ ಬ್ರಹ್ಮಮಯವೇ.

ಸಂಧ್ಯಾದೀಪಕ್ಕೆ ನಮನ -

ದೀಪಮೂಲೇ ಸ್ಥಿತೋ ಬ್ರಹ್ಮಾ
ದೀಪಮಧ್ಯೇ ಜನಾರ್ದನಃ ।
ದೀಪಾಗ್ರೇ ಶಂಕರಃ ಪ್ರೋಕ್ತಃ
ಸಂಧ್ಯಾದೀಪ ನಮೋಽಸ್ತು ತೇ ॥

ದೀಪದ ಮೂಲ, ಮಧ್ಯ, ಮತ್ತು ಕೊನೆಯಲ್ಲಿ ಕ್ರಮವಾಗಿ ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರು ಇದ್ದಾರೆ. ಆದ್ದರಿಂದ ಸಂಧ್ಯಾಕಾಲದ ಜ್ಯೋತಿಗೆ ನಮಸ್ಕಾರ.

ದೇವರಲ್ಲಿ ಕ್ಷಮಾಯಾಚನೆ -

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ ।
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥

ಮನೋವಾಕ್ಕಾಯಗಳಿಂದಾಗಲಿ, ಇಂದ್ರಿಯಗಳಿಂದಾಗಲೀ, ಸ್ವಾಭಾವಿಕವಾಗಿಯಾಗಲಿ ಮಾಡಿರುವ

ದಲ್ಲವನ್ನು ಪರಮಾತ್ಮನಾದ ನಾರಾಯಣನಿಗಾಗಿ ಎಂದು ಭಾವಿಸಿ ಆತನಿಗೆ ಅವಲ್ಲವನ್ನು ಅರ್ಪಿಸುತ್ತೇನೆ.

ರಾತ್ರಿ ಮಲಗುವ ಮುನ್ನ -

ರಾಮಂ ಸ್ಕಂದಂ ಹನೂಮಂತಂ
ವೈನತೇಯಂ ವೃಕೋದರಮ್ ।
ಶಯನೇ ಯಃ ಸ್ಮರೇನ್ನಿತ್ಯಂ
ದುಃಸ್ವಪ್ನಸ್ತಸ್ಯ ನಶ್ಯತಿ ॥

ರಾಮ, ಷಣ್ಮುಖ, ಹನುಮಾನ್, ಗರುಡ ಮತ್ತು ಭೀಮ-ಈ ಐವರನ್ನು ಮಲಗುವಾಗ ಸ್ಮರಿಸಿದರೆ ಅವನಿಗೆ ದುಃಸ್ವಪ್ನ ಬೀಳುವುದಿಲ್ಲ.

## ೫. ವಿಶೇಷ ಸಂದರ್ಭಗಳು

ಪಂಚಗವ್ಯ ಸ್ವೀಕರಿಸುವಾಗ -

ಯತ್ ತ್ವಗಸ್ಥಿಗತಂ ಪಾಪಂ ದೇಹೇ ತಿಷ್ಠತಿ ಮಾಮಕೇ ।
ಪ್ರಾಶನಂ ಪಂಚಗವ್ಯಸ್ಯ ದಹತ್ಯಗ್ನಿರಿವೇಂಧನಮ್ ॥

ನನ್ನ ದೇಹದಲ್ಲಿರುವ ತ್ವಗಸ್ಥಿಗತವಾದ ಪಾಪವನ್ನು, ಅಗ್ನಿಯು ಕಟ್ಟಿಗೆಯನ್ನು ದಹಿಸಿದಂತೆ, ಈ ಪಂಚಗವ್ಯಪ್ರಾಶನವು ದಹಿಸುತ್ತದೆ.

ಯುಗಾದಿಯಂದು ಬೇವು-ಬೆಲ್ಲ ಸ್ವೀಕರಿಸುವಾಗ -

ಶತಾಯುರ್ವಜ್ರದೇಹಾಯ ಸರ್ವಸಂಪತ್ಕರಾಯ ಚ ।

ಸರ್ವಾರಿಷ್ಟವಿನಾಶಾಯ ನಿಂಬಕಂದಲಭಕ್ಷಣಮ್ ॥

ನೂರು ವರ್ಷಗಳ ಕಾಲ ವಜ್ರದೇಹಿಯಾಗಿರಲು, ಸರ್ವ ಸಂಪತ್ತುಗಳನ್ನು ಪಡೆಯಲು ಮತ್ತು ಸಕಲ ಅನಿಷ್ಟ-ನಿವಾರಣೆಗಾಗಿಯೂ ಬೇವಿನ ಹೊಸ ಚಿಗುರನ್ನು ತಿನ್ನಬೇಕು.

ವಿಜಯದಶಮಿಯಂದು ಶಮಿ ಹಂಚುವಾಗ -

ಶಮೀ ಶಮಯತೇ ಪಾಪಂ ಶಮೀ ಶತ್ರುವಿನಾಶಿನೀ ।
ಅರ್ಜುನಸ್ಯ ಧನುರ್ಧಾರಿರಾಮಸ್ಯ ಪ್ರಿಯದರ್ಶಿನೀ ॥

ಅರ್ಜುನನಿಗೂ, ಧನುರ್ಧಾರಿಯಾದ ರಾಮನಿಗೂ ಪ್ರಿಯ-ದರ್ಶಿನಿಯಾದ ಶಮಿಯು ಪಾಪವನ್ನು ಶಾಂತಗೊಳಿಸುತ್ತದೆ. ಶತ್ರುವನ್ನು ದೂರಮಾಡುತ್ತದೆ.

ರಕ್ಷೆಯನ್ನು ಕಟ್ಟುವಾಗ -

ಯೇನ ಬದ್ಧೋ ಬಲೀ ರಾಜಾ
ದಾನವೇಂದ್ರೋ ಮಹಾಬಲಃ ।
ತೇನ ತ್ವಾಮನುಬಧ್ನಾಮಿ
ರಕ್ಷೇ ಮಾಮವ ಮಾಮವ ॥

ಯಾವುದರಿಂದ ಬಲಶಾಲಿಯಾದ ಬಲಿಯು ಕಟ್ಟಲ್ಪಟ್ಟನೋ ಅದನ್ನೇ ನಿನಗೆ ಕಟ್ಟುತ್ತೇನೆ. ಎಲೇ ರಕ್ಷೆಯೇ, ನನ್ನನ್ನು ರಕ್ಷಿಸು.

ತುಳಸಿಗೆ ನಮಸ್ಕಾರ -

ಯನ್ಮೂಲೇ ಸರ್ವತೀರ್ಥಾನಿ ಯನ್ಮಧ್ಯೇ ಸರ್ವದೇವತಾಃ ।

ಯದಗ್ರೇ ಸರ್ವವೇದಾಶ್ಚ ತುಲಸಿ ತ್ವಾಂ ನಮಾಮ್ಯಹಮ್ ॥
ಯಾವುದರ ಮೂಲ, ಮಧ್ಯ, ಮತ್ತು ಅಗ್ರಗಳಲ್ಲಿ ಕ್ರಮವಾಗಿ ಎಲ್ಲ ತೀರ್ಥಗಳೂ, ದೇವತೆಗಳೂ ಮತ್ತು ಸಕಲವೇದಗಳೂ ಇವೆಯೋ ಅಂತಹ ತುಲಸಿಯನ್ನು ನಮಸ್ಕರಿಸುತ್ತೇನೆ.

ನಮಸ್ತುಲಸಿ ಕಲ್ಯಾಣಿ
ನಮೋ ವಿಷ್ಣುಪ್ರಿಯೇ ಶುಭೇ ।
ನಮೋ ಮೋಕ್ಷಪ್ರದೇ ದೇವಿ
ನಮಃ ಸಂಪತ್‌ಪ್ರದಾಯಿಕೇ ॥

ಕಲ್ಯಾಣಿಯಾದ ತುಲಸಿಗೆ ನಮಸ್ಕಾರ. ಮಂಗಲ ಸ್ವರೂಪಿಯಾದ ತುಲಸಿಯು ವಿಷ್ಣುಪ್ರಿಯಳು. ಸಂಪತ್ತನ್ನು ನೀಡುವ ತುಲಸಿ ಮೋಕ್ಷಪ್ರದಳೂ ಹೌದು.

ಅಶ್ವತ್ಥಪ್ರದಕ್ಷಿಣೆ

ಮೂಲತೋ ಬ್ರಹ್ಮರೂಪಾಯ
ಮಧ್ಯತೋ ವಿಷ್ಣುರೂಪಿಣೇ ।
ಅಗ್ರತೋ ರುದ್ರರೂಪಾಯ
ವೃಕ್ಷರಾಜಾಯ ತೇ ನಮಃ ॥

ಮೂಲ, ಮಧ್ಯ ಮತ್ತು ಅಗ್ರಗಳಲ್ಲಿ ಕ್ರಮವಾಗಿ ಬ್ರಹ್ಮ, ವಿಷ್ಣು ಮತ್ತು ರುದ್ರ ರೂಪನಾಗಿರುವ ವೃಕ್ಷರಾಜನಿಗೆ (ಅಶ್ವತ್ಥ) ನಮಸ್ಕಾರ.

ಗೋಮಾತೆಗೆ ನಮಸ್ಕಾರ -



ಗಾವೋ ಮಮಾಗ್ರತಃ ಸಂತು
ಗಾವೋ ಮೇ ಸಂತು ಪೃಷ್ಠತಃ
ಗಾವೋ ಮೇ ಹೃದಯೇ ನಿತ್ಯಂ
ಗವಾಂ ಮಧ್ಯೇ ವಸಾಮ್ಯಹಮ್ ॥

ನನ್ನ ಮುಂದೆ ಹಿಂದೆ ಮತ್ತು ಹೃದಯದಲ್ಲಿ ಗೋಮಾತೆ ಸದಾ ನೆಲೆಸಲಿ. ಗೋವುಗಳ ಮಧ್ಯದಲ್ಲಿಯೇ ನಾನು ವಾಸಮಾಡುತ್ತೇನೆ.

ತೀರ್ಥಸ್ನಾನ ಮಾಡುವಾಗ -

ತ್ವಂ ರಾಜಾ ಸರ್ವತೀರ್ಥಾನಾಂ ತ್ವಮೇವ ಜಗತಃ ಪಿತಾ ।
ಯಾಚಿತಂ ದೇಹಿ ಮೇ ತೀರ್ಥ ಸರ್ವಪಾಪಾಪನುತ್ತಯೇ ॥

ನೀನು ಎಲ್ಲಾ ತೀರ್ಥಗಳಿಗೂ ರಾಜನಾಗಿದ್ದೀ. ಜಗತ್ತಿನ ಪಿತನೂ ನೀನೇ. ಆದ್ದರಿಂದ ಎಲೇ ತೀರ್ಥವೇ, ಸರ್ವಪಾಪಗಳ ನಿವಾರಣೆಗಾಗಿ ನಾನು ಬೇಡಿದ್ದನ್ನು ಕೊಡು.

ಗೋಗ್ರಾಸ ಕೊಡುವಾಗ -

ಸುರಭಿರ್ವೈಷ್ಣವೀಮಾತಃ ಸುರಲೋಕೇ ಮಹೀಯಸೇ ।
ಗ್ರಾಸಮುಷ್ಟಿರ್ಮಯಾ ದತ್ತಾ ಸುರಭೇ ಪ್ರತಿಗೃಹ್ಯತಾಮ್ ॥

ತಾಯಿ! ನೀನು ವಿಷ್ಣುವಿನ ಸಂಬಂಧ ಪಡೆದು ದೇವಲೋಕದಲ್ಲಿಯೂ ಪೂಜಿಸಲ್ಪಡುವೆ. ಮುಷ್ಟಿಪರಿಮಿತ ಮೇವ ಗ್ರಾಸ(ತುತ್ತು)ವನ್ನು ನೀಡುತ್ತಿದ್ದೇನೆ, ಸ್ವೀಕರಿಸು.

ನವಗ್ರಹಗಳಿಗೆ ನಮಸ್ಕಾರ -

ನಮಃ ಸೂರ್ಯಾಯ ಸೋಮಾಯ
ಮಂಗಲಾಯ ಬುಧಾಯ ಚ ।
ಗುರುಶುಕ್ರಶನಿಭ್ಯಶ್ಚ
ರಾಹವೇ ಕೇತವೇ ನಮಃ ॥

ಸೂರ್ಯ, ಚಂದ್ರ, ಮಂಗಲ, ಬುಧ, ಗುರು, ಶುಕ್ರ, ಶನಿ, ರಾಹು ಮತ್ತು ಕೇತು - ಈ ನವಗ್ರಹಗಳಿಗೆ ನಮಸ್ಕಾರ.

ಪತಿವ್ರತೆಯರ ಸ್ಮರಣೆ -

ಅಹಲ್ಯಾ ದ್ರೌಪದೀ ಸೀತಾ ತಾರಾ ಮಂದೋದರೀ ತಥಾ ।
ಪಂಚಕಂ ನಾ ಸ್ಮರೇನ್ನಿತ್ಯಂ ಮಹಾಪಾತಕನಾಶನಮ್ ॥

ಅಹಲ್ಯಾ, ದ್ರೌಪದೀ, ಸೀತಾ, ತಾರಾ ಮತ್ತು ಮಂಡೋದರಿ - ಈ ಐವರನ್ನು ಮನುಷ್ಯನು ಸ್ಮರಿಸಬೇಕು. ಇದರಿಂದ ಮಹಾಪಾತಕವು ನಾಶವಾಗುತ್ತದೆ.

ಚಿರಂಜೀವಿಗಳ ಸ್ಮರಣೆ (ದೀರ್ಘಾಯುಸ್ಸಿಗಾಗಿ) -

ಅಶ್ವತ್ಥಾಮಾ ಬಲಿರ್ವ್ಯಾಸೋ ಹನೂಮಾಂಶ್ಚ ವಿಭೀಷಣಃ ।
ಕೃಪಃ ಪರಶುರಾಮಶ್ಚ ಸಪ್ತೈತೇ ಚಿರಜೀವಿನಃ ॥

ಅಶ್ವತ್ಥಾಮ, ಬಲಿ, ವ್ಯಾಸ, ಹನುಮಾನ್, ವಿಭೀಷಣ, ಕೃಪ ಮತ್ತು ಪರಶುರಾಮ - ಈ ಏಳು ಜನರು ಚಿರಂಜೀವಿಗಳು. (ಇವರ ಸ್ಮರಣೆಯಿಂದ ದೀರ್ಘಾಯುಸ್ಸು ಸಿದ್ಧಿಸುತ್ತದೆ.)

## ೬. ದೇವರ ಸ್ತುತಿ

**ಗುರು**

ಗುರುರ್ಬ್ರಹ್ಮಾ ಗುರುರ್ವಿಷ್ಣುಃ
ಗುರುರ್ದೇವೋ ಮಹೇಶ್ವರಃ ।
ಗುರುಃ ಸಾಕ್ಷಾತ್ ಪರಂ ಬ್ರಹ್ಮ
ತಸ್ಮೈ ಶ್ರೀಗುರವೇ ನಮಃ ॥

ಗುರುವು ಬ್ರಹ್ಮ, ವಿಷ್ಣು ಮತ್ತು ಮಹೇಶ್ವರ ಸ್ವರೂಪನಾಗಿದ್ದಾನೆ. ಸಾಕ್ಷಾತ್ ಪರಬ್ರಹ್ಮವಸ್ತುವೂ ಗುರುವೇ. ಆದ್ದರಿಂದ ಇಂತಹ ಗುರುವಿಗೆ ವಂದನೆಗಳು.

**ಸರಸ್ವತಿ**

ಸರಸ್ವತಿ ನಮಸ್ತುಭ್ಯಂ
ವರದೇ ಕಾಮರೂಪಿಣಿ ।
ವಿದ್ಯಾರಂಭಂ ಕರಿಷ್ಯಾಮಿ
ಸಿದ್ಧಿರ್ಭವತು ಮೇ ಸದಾ ॥

ದೇವಿ! ಸರಸ್ವತಿ! ವರವನ್ನು ನೀಡುವ ನೀನು ಇಚ್ಛೆಗನುಗುಣವಾಗಿ ರೂಪ ಧರಿಸಬಲ್ಲೆ. ನಿನಗೆ ನಮಸ್ಕಾರ. ವಿದ್ಯಾರಂಭವನ್ನು ಮಾಡುತ್ತಿದ್ದೇನೆ. ಸಿದ್ಧಿಯನ್ನುಂಟುಮಾಡು.

**ಗಜಾನನ**

ವಕ್ರತುಂಡ ಮಹಾಕಾಯ
ಕೋಟಿಸೂರ್ಯಸಮಪ್ರಭ ।
ನಿರ್ವಿಘ್ನಂ ಕುರು ಮೇ ದೇವ
ಸರ್ವಕಾರ್ಯೇಷು ಸರ್ವದಾ ॥

ದೇವ ಗಜಾನನ ! ಲಂಬೋದರನಾದ ನೀನು ಕೋಟಿ ಸೂರ್ಯರ ಪ್ರಭೆಯುಳ್ಳವನಾಗಿರುವೆ. ಎಲ್ಲಾ ಕಾರ್ಯಗಳಲ್ಲಿಯೂ ನನಗೆ ಸದಾ ನಿರ್ವಿಘ್ನವನ್ನುಂಟು ಮಾಡು.

**ರಾಮ**

ರಾಮಾಯ ರಾಮಭದ್ರಾಯ
ರಾಮಚಂದ್ರಾಯ ವೇಧಸೇ ।
ರಘುನಾಥಾಯ ನಾಥಾಯ
ಸೀತಾಯಾಃ ಪತಯೇ ನಮಃ ॥

ಸೀತಾಪತಿಯಾದ ಶ್ರೀರಾಮನಿಗೆ ನಮಸ್ಕಾರ. ಅವನು ಮಂಗಲಸ್ವರೂಪಿ. ಚಂದ್ರನಂತೆ ಮುದ ನೀಡಬಲ್ಲವ. ಮತ್ತು ಸಾಕ್ಷಾತ್ ಪರಬ್ರಹ್ಮನೇ. ಆದ್ದರಿಂದ ರಘುಕುಲದ ಒಡೆಯನಾಗಿದ್ದರೂ ಲೋಕಕ್ಕೆಲ್ಲ ಸ್ವಾಮಿಯಾಗಿದ್ದಾನೆ.

**ಕೃಷ್ಣ**

ವಸುದೇವಸುತಂ ದೇವಂ
ಕಂಸಚಾಣೂರಮರ್ದನಮ್ ।
ದೇವಕೀಪರಮಾನಂದಂ
ಕೃಷ್ಣಂ ವಂದೇ ಜಗದ್ಗುರುಮ್ ॥

ಸಮಸ್ತ ಪ್ರಪಂಚಕ್ಕೆ ಗುರುವಾದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ. ಅವನು ವಸುದೇವನ ಪುತ್ರ. ದೇವನಾದ ಇವನು ಕಂಸ ಮತ್ತು ಚಾಣೂರ ಎಂಬ ರಾಕ್ಷಸರನ್ನು ನಾಶಮಾಡಿದ್ದಾನೆ. ತಾಯಿ ದೇವಕಿಗಂತೂ ಅತ್ಯಂತ ...ವನ್ನು ಉಂಟುಮಾಡಿದ್ದಾನೆ.

ಶಿವ    ಹರೋ ಪಾಪಾನಿ ಹರತಾತ್
ಶಿವೋ ದತ್ತಾಂ ಸದಾ ಶಿವಂ ।
ನ ಜಾನಾಮಿತಿ ನೋ ಬ್ರೂಯಾತ್
ಸರ್ವಜ್ಞಪದಭಾಗ್ಯತಃ ॥

ಹರನು ಪಾಪವನ್ನು ಪರಿಹರಿಸಲಿ. ಶಿವನು ಯಾವಾಗಲೂ ಮಂಗಳವನ್ನು ನೀಡಲಿ. ಭಕ್ತನ ವಿಷಯ ನನಗೇನೂ ಗೊತ್ತಿಲ್ಲವೆಂದು ಶಿವನು ಹೇಳಲು ಶಕ್ಯನಲ್ಲ. ಏಕೆಂದರೆ ಶಿವನು ಸರ್ವಜ್ಞ.

## ೭. ಮಂಗಳ

ಸ್ವಸ್ತಿ ಪ್ರಜಾಭ್ಯಃ ಪರಿಪಾಲಯಂತಾಂ
ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ ।
ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾಃ ಸಮಸ್ತಾಃ ಸುಖಿನೋ ಭವಂತು ॥

ಸಮಸ್ತ ಪ್ರಜೆಗಳಿಗೆ ಮಂಗಳವಾಗಲಿ. ಭೂಪಾಲಕರು ನ್ಯಾಯಮಾರ್ಗದಿಂದ ಭೂಮಂಡಲವನ್ನು ರಕ್ಷಿಸಲಿ. ಗೋಮಾತೆಗೂ, ಪರಬ್ರಹ್ಮನ ಸ್ವರೂಪ ತಿಳಿದವರಿಗೂ ಮಂಗಳವಾಗಲಿ. ಸಕಲ ಲೋಕವೂ ಸದಾ ಸುಖಿಯಾಗಲಿ.

ಕಾಲೇ ವರ್ಷತು ಪರ್ಜನ್ಯಃ
ಪೃಥಿವೀ ಸಸ್ಯಶಾಲಿನೀ ।

ದೇಶೋಽಯಂ ಕ್ಷೋಭರಹಿತಃ
ಸಜ್ಜನಾಸ್ಸಂತು ನಿರ್ಭಯಾಃ ॥

ಕಾಲಕಾಲಕ್ಕೆ ಮೋಡವು ಮಳೆಗರೆಯಲಿ. ಭೂಮಿ ಸಸ್ಯಶ್ಯಾಮಲೆಯಾಗಲಿ. ಈ ಪ್ರಪಂಚದಲ್ಲಿ ಕ್ಷೋಭೆಯು ಶಮನವಾಗಲಿ. ನಿರ್ಭೀತಿಯಿಂದ ಸಜ್ಜನರು ಬಾಳಲಿ.

ಅಪುತ್ರಾಃ ಪುತ್ರಿಣಃ ಸಂತು
ಪುತ್ರಿಣಃ ಸಂತು ಪೌತ್ರಿಣಃ ।
ಅಧನಾಃ ಸಧನಾಃ ಸಂತು
ಜೀವಂತು ಶರದಾಂ ಶತಮ್ ॥

ಮಕ್ಕಳಿಲ್ಲದವರಿಗೆ ಮಕ್ಕಳಾಗಲಿ. ಮಕ್ಕಳುಳ್ಳವರು ಮೊಮ್ಮಕ್ಕಳನ್ನು ನೋಡಲಿ. ನಿರ್ಧನರು ಧನವಂತರಾಗಲಿ. ಎಲ್ಲರೂ ನೂರು ಕಾಲ ಬಾಳಲಿ.

ಸರ್ವೇ ಚ ಸುಖಿನಃ ಸಂತು
ಸರ್ವೇ ಸಂತು ನಿರಾಮಯಾಃ ।
ಸರ್ವೇ ಭದ್ರಾಣಿ ಪಶ್ಯಂತು
ಮಾ ಕಶ್ಚಿದ್ ದುಃಖಭಾಗ್ ಭವೇತ್ ॥

ಸುಖಿಗಳಾಗಲಿ ಎಲ್ಲರೂ. ನಿರೋಗಿಗಳಾಗಲಿ ಸಕಲರು. ಎಲ್ಲರೂ ಒಳ್ಳೆಯದನ್ನು ನೋಡಲಿ. ಯಾರೊಬ್ಬರು ದುಃಖವನ್ನು ಕಾಣದಿರಲಿ.

# ೮. ತಿಥಿ-ನಕ್ಷತ್ರಾದಿಗಳು

## ಹದಿನೈದು ತಿಥಿಗಳು

೧. ಪ್ರತಿಪತ್(ಪಾಡ್ಯ) ೨. ದ್ವಿತೀಯಾ(ಬಿದಿಗ)
೩. ತೃತೀಯಾ(ತದಿಗ) ೪. ಚತುರ್ಥೀ(ಚೌತಿ)
೫. ಪಂಚಮೀ ೬. ಷಷ್ಠೀ ೭. ಸಪ್ತಮೀ ೮. ಅಷ್ಟಮೀ
೯. ನವಮೀ ೧೦. ದಶಮೀ ೧೧. ಏಕಾದಶೀ
೧೨. ದ್ವಾದಶೀ ೧೩. ತ್ರಯೋದಶೀ ೧೪. ಚತುರ್ದಶೀ
೧೫. ಪೂರ್ಣಿಮಾ (ಶುಕ್ಲಪಕ್ಷಃ) ಅಮಾವಾಸ್ಯಾ (ಕೃಷ್ಣಪಕ್ಷಃ)

## ಹನ್ನೆರಡು ಚಾಂದ್ರಮಾನ ತಿಂಗಳುಗಳು

೧. ಚೈತ್ರ ೨. ವೈಶಾಖ ೩. ಜ್ಯೇಷ್ಠ ೪. ಆಷಾಢ
೫. ಶ್ರಾವಣ ೬. ಭಾದ್ರಪದ ೭. ಅಶ್ವಯುಜ
೮. ಕಾರ್ತೀಕ ೯. ಮಾರ್ಗಶೀರ್ಷ ಮಾರ್ಗಶಿರ
೧೦. ಪುಷ್ಯ ೧೧. ಮಾಘ ೧೨. ಫಾಲ್ಗುಣ

## ಹನ್ನೆರಡು ಸೌರಮಾನ ತಿಂಗಳುಗಳು (ರಾಶಿಗಳು)

೧. ಮೇಷ ೨. ವೃಷಭ ೩. ಮಿಥುನ ೪. ಕರ್ಕಾಟಕ
೫. ಸಿಂಹ ೬. ಕನ್ಯಾ ೭. ತುಲಾ ೮. ವೃಶ್ಚಿಕ ೯. ಧನು
೧೦. ಮಕರ ೧೧. ಕುಂಭ ೧೨. ಮೀನ

## ಆರು ಋತುಗಳು

ಚೈತ್ರ ವೈಶಾಖ ಮಾಸೌ) ವಸಂತ ಋತುಃ

(ಜ್ಯೇಷ್ಠ-ಆಷಾಢಯೋಃ) ಗ್ರೀಷ್ಮಃಋತುಃ
(ಶ್ರಾವಣ-ಭಾದ್ರಪದಯೋಃ) ವರ್ಷಃಋತುಃ
(ಅಶ್ವಯುಜ-ಕಾರ್ತಿಕಯೋಃ) ಶರದ್ ಋತುಃ
(ಮಾರ್ಗಶೀರ್ಷ-ಪುಷ್ಯಯೋಃ) ಹೇಮಂತಃಋತುಃ
(ಮಾಘ-ಫಾಲ್ಗುನಯೋಃ) ಶಿಶಿರಃಋತುಃ

## ಎರಡು ಅಯನಗಳು

ಉತ್ತರಾಯಣ - (ಮಕರಸಂಕ್ರಾಂತಿಯಿಂದ ಕರ್ಕಸಂಕ್ರಾಂತಿಯ ವರೆಗ ಆರು ತಿಂಗಳು)
ದಕ್ಷಿಣಾಯನ - (ಕರ್ಕಸಂಕ್ರಾಂತಿಯಿಂದ ಮಕರ ಸಂಕ್ರಾಂತಿಯ ವರಗೆ ಆರು ತಿಂಗಳು)

## ಇಪ್ಪತ್ತೇಳು ನಕ್ಷತ್ರಗಳು

೧. ಅಶ್ವಿನಿ ೨. ಭರಣಿ ೩. ಕೃತ್ತಿಕೆ ೪. ರೋಹಿಣಿ ೫. ಮೃಗಶಿರಾ ೬. ಆರ್ದ್ರಾ ೭. ಪುನರ್ವಸು ೮. ಪುಷ್ಯ ೯. ಆಶ್ಲೇಷಾ ೧೦. ಮಘಾ ೧೧. ಪುಬ್ಬ ೧೨. ಉತ್ತರಾ ೧೩. ಹಸ್ತ ೧೪. ಚಿತ್ತಾ ೧೫. ಸ್ವಾತಿ ೧೬. ವಿಶಾಖಾ ೧೭. ಅನುರಾಧಾ ೧೮. ಜ್ಯೇಷ್ಠಾ ೧೯. ಮೂಲಾ ೨೦. ಪೂರ್ವಾಷಾಢ ೨೧. ಉತ್ತರಾಷಾಢ ೨೨. ಶ್ರವಣ ೨೩. ಧನಿಷ್ಠಾ ೨೪. ಶತಭಿಷಾ ೨೫. ಪೂರ್ವಾಭಾದ್ರ ೨೬. ಉತ್ತರಾಭಾದ್ರ ೨೭. ರೇವತಿ

# ೯. ಪ್ರಶ್ನೋತ್ತರ

ತಮಗಾಗಿ ಇಲ್ಲಿ ಕೆಲ ಉಪಯುಕ್ತ ಪ್ರಶ್ನೆಗಳನ್ನೂ ಅವುಗಳಿಗೆ ಉತ್ತರವನ್ನೂ ನೀಡಿದೆ. ಇಲ್ಲಿ ಹೇಳಿರುವ ವಿಚಾರ ತಮಗೆ ಸಮ್ಮತವಾದೀತೆಂದು ನಮ್ಮ ನಂಬಿಕೆ.

● **ಸಂಸ್ಕೃತ ಕಠಿಣ ಭಾಷೆಯೇ ?**

ಸಂಸ್ಕೃತ ಕಠಿಣವೆಂದು ಕೆಲವರು ಭಾವಿಸುತ್ತಾರೆ. ಜನಸಾಮಾನ್ಯರು ಸರಳ ಸಂಸ್ಕೃತದಲ್ಲಿ ಮಾತನಾಡಿದ್ದನ್ನು ಕೇಳಿರದಿರುವುದೇ ಇದಕ್ಕೆ ಕಾರಣ. ಸರಳ ಅಥವಾ ಕಠಿಣವೆಂಬ ವಿಭಾಗ ಯಾವುದೇ ಭಾಷೆಗಿಲ್ಲ. ಸರಳ ಪ್ರೌಢವೆಂಬ ವಿಭಾಗವಿದೆ. ಆಡುಭಾಷೆ ಸರಳವಾಗಿರುತ್ತದೆ. ಗ್ರಾಂಥಿಕಭಾಷೆ ಪ್ರೌಢಶೈಲಿಯಲ್ಲಿರುತ್ತದೆ. ಹಾಗಾದರೆ ಸಂಸ್ಕೃತ ಕಠಿಣವೆಂಬ ಭಾವನೆ ಜನರ ಮನಸ್ಸಿನಲ್ಲಿ ಹೇಗೆ ಮನೆ ಮಾಡಿತು ? ಇದಕ್ಕೆ ಮುಖ್ಯ ಕಾರಣ ಸಂಸ್ಕೃತ ಕಲಿಕೆಗೆ ಬಳಸುವ ಪದ್ಧತಿ. ಕಳೆದ ನೂರಾರು ವರ್ಷಗಳಿಂದ ಭಾರತದಾದ್ಯಂತ ಪ್ರಾಥಮಿಕವಿದ್ಯಾಲಯಗಳಿಂದ ವಿಶ್ವವಿದ್ಯಾಲಯದ ವರೆಗೆ ಎಲ್ಲ ಹಂತಗಳಲ್ಲಿಯೂ ವ್ಯಾಕರಣಾನುವಾದ ಪದ್ಧತಿಯಿಂದ ಸಂಸ್ಕೃತವನ್ನು ಕಲಿಸಲಾಗುತ್ತಿದೆ. ಆದರಿದು ಭಾರತೀಯ ಪದ್ಧತಿಯಲ್ಲ, ಯುರೋಪೀಯ ಪದ್ಧತಿಯಿದು. ಈ ಪದ್ಧತಿಯಲ್ಲಿ ಹಲವಾರು ನ್ಯೂನತೆಗಳಿರುವುದರಿಂದ ಯುರೋಪಿನಲ್ಲಿಯೂ ಕೈಬಿಟ್ಟ ಪದ್ಧತಿಯಿದು. ನಾವಿಂದು ಅದನ್ನು ಕಟ್ಟಿ ಕುಳಿತಿದ್ದೇವೆ ! ಸಂಸ್ಕೃತವು ಕನ್ನಡವೇ ಮೊದಲಾದ ಪ್ರಾದೇಶಿಕ ಭಾಷೆಯಿಂದಲೋ ಇಂಗ್ಲಿಷಿನ

ಮೂಲಕವೇ ಕಲಿಸುತ್ತಿರುವುದೂ ಸಂಸ್ಕೃತದ ಇಂದಿನ ದುರ್ಗತಿಗೆ ಇನ್ನೊಂದು ಕಾರಣ. ಆದ್ದರಿಂದ ಪ್ರಾಥಮಿಕಸ್ತರದಿಂದಲೇ ಮೊದಲುಗೊಂಡು ಸಂಸ್ಕೃತಮಾಧ್ಯಮದಲ್ಲಿಯೇ ಸಂಸ್ಕೃತ ಕಲಿಸುವಂತಾಗಬೇಕು.

● **ಸಂಸ್ಕೃತ ಎಂದಾದರೂ ಆಡುಭಾಷೆಯಾಗಿತ್ತೇ ?**

'ಭಾಷೆ'ಯೊಂದು ಆಡುಭಾಷೆಯಾಗಿತ್ತೇ ಎಂದು ಕೇಳುವುದೇ ತುಂಬ ಮೂರ್ಖತನದ ಪ್ರಶ್ನೆ. ಆಡುವುದರಿಂದಾಗಿಯೇ ಭಾಷೆ 'ಭಾಷೆ'ಯಾಗುತ್ತದೆ. ಸಂಸ್ಕೃತ ಹಿಂದೆ ಆಡುಭಾಷೆಯಾಗಿತ್ತು ಎಂಬುದಕ್ಕೆ ಮಹಾಭಾಷ್ಯವೇ ಮೊದಲಾದ ಗ್ರಂಥಗಳಲ್ಲಿ ಸಾಕಷ್ಟು ಪ್ರಮಾಣಗಳಿವೆ.

● **ಹಾಗಾದರೆ ಇಂದು ವ್ಯವಹಾರದಲ್ಲಿ ಸಂಸ್ಕೃತದ ಬಳಕೆ ಯಾಕೆ ಕಂಡುಬರುತ್ತಿಲ್ಲ ?**

ಇದಕ್ಕೆ ಹಲವಾರು ಕಾರಣಗಳಿವೆ. ಅವುಗಳಲ್ಲಿ ಕೆಲವು ಐತಿಹಾಸಿಕವಾದವುಗಳು. ಪ್ರಾದೇಶಿಕ ಭಾಷೆಗಳ ವಿಕಾಸ, ಪರಕೀಯರ ಆಕ್ರಮಣ, ಅವರ ಆಡಳಿತಕಾಲದಲ್ಲಿ ವಿದೇಶೀಯ ಭಾಷೆಗಳಿಗೆ ಪ್ರೋತ್ಸಾಹ ಮುಂತಾದ ಹಲವು ಸಾಮಾಜಿಕ ಕಾರಣಗಳು ಇದಕ್ಕಿವೆ. ಇತಿಹಾಸದ ಮಧ್ಯಕಾಲದಲ್ಲಿ ಸಾಮಾಜಿಕ ವ್ಯವಸ್ಥೆಯಲ್ಲಿ ಹಲವು ವಿಕೃತಿಗಳು ಉಂಟಾಗಿದ್ದುವು. ಅವುಗಳ ದುಷ್ಪರಿಣಾಮ ಸಂಸ್ಕೃತದ ಮೇಲೆಯೂ ಆಯಿತು. ಸಂಸ್ಕೃತಕ್ಕೆ ಆದ ಮಹಾಘಾತವೆಂದರೆ ಮೆಕಾಲೆಪ್ರಣೀತ ಇಂಗ್ಲೀಷ್ ಶಿಕ್ಷಣ ಪದ್ಧತಿಯು ಭಾರತಕ್ಕೆ ಬಂದುದು.

● **ಸಂಸ್ಕೃತವು ಯಾವುದೇ ಒಂದು ವಿಶಿಷ್ಟ ವರ್ಗದ ಭಾಷೆಯೇ ?**

ಹಾಗಿಲ್ಲ. ಸಂಸ್ಕೃತ ಎಲ್ಲರ ಭಾಷೆ. ಹಿಂದೆಯೂ ಹೀಗೆಯೇ ಇತ್ತು. ಕೆಲ ಉದಾಹರಣೆಗಳನ್ನು ನೋಡಿ - ಆದಿಕವಿ ವಾಲ್ಮೀಕಿ ಬೇಡರ ಕುಲದವನು. ಕಾಳಿದಾಸನು ಕುರುಬಕುಲದವನು. ಮಹರ್ಷಿ ವ್ಯಾಸರು ಬೆಸ್ತಮಹಿಳೆಯಿಂದ ಜನಿಸಿದವರು. ಶ್ರೀಹರ್ಷ, ಭೋಜ ಮುಂತಾದವರು ಕ್ಷತ್ರಿಯರು. ಹೀಗೆ ವಿಭಿನ್ನ ಜಾತಿಯ ಜನರು ಸಂಸ್ಕೃತದ ವಿದ್ವಾಂಸರಾಗಿದ್ದರು. ಆದ್ದರಿಂದ ಇಷ್ಟಂತೂ ನಿಶ್ಚಿತ 'ಸಂಸ್ಕೃತ ಎಲ್ಲರ ಭಾಷೆಯಾಗಿತ್ತು, ಎಲ್ಲರ ಭಾಷೆಯಾಗಿಯೇ ಉಳಿಯುತ್ತದೆ ಕೂಡ.' ಸಂಸ್ಕೃತ ಅಭಿಯಾನದ ಒಂದು ವಿಶೇಷತೆಯೆಂದರೆ ಜಾತಿ-ಮತ-ವರ್ಗ-ಭಾಷೆ-ಪ್ರದೇಶ-ಉತ್ತರ-ದಕ್ಷಿಣ ಮುಂತಾದ ಯಾವುದೇ ಭೇದಭಾವವಿಲ್ಲದೇ ಸಂಸ್ಕೃತವನ್ನು ಎಲ್ಲರಿಗೆ ಕಲಿಸುವುದು. ಇದರಿಂದಲೇ ರಾಷ್ಟ್ರದ ಭಾವಾತ್ಮಕ ಏಕತೆಯು ಸಿದ್ಧಿಸುತ್ತದೆ.

● **ಸಂಸ್ಕೃತವು ವ್ಯವಹಾರ ಭಾಷೆಯಾದರೆ ಕನ್ನಡವೇ ಮೊದಲಾದ ಭಾಷೆಗಳಿಗೆ ತೊಂದರೆಯಾದೀತೇ ?**

ಖಂಡಿತ ಇಲ್ಲ. ಬದಲಾಗಿ ಅವು ಚೆನ್ನಾಗಿ ಬೆಳೆಯುತ್ತವೆ. ಸಂಸ್ಕೃತವು ಎಲ್ಲ ಭಾರತೀಯ ಭಾಷೆಗಳಿಗೂ ಪೂರಕವಾಗಿದೆ. ಸಂಸ್ಕೃತವು ಯಾವುದೇ ಭಾರತೀಯ ಭಾಷೆಯ ಸ್ಥಾನದಲ್ಲಿ ವೈಕಲ್ಪಿಕರೂಪದಲ್ಲಿ ಬರುವುದಿಲ್ಲ. ಅದಕ್ಕೆ ತನ್ನದೇ ಆದ ಬೇರೆ ವಿಶಿಷ್ಟ ಸ್ಥಾನವಿದೆ. ಅದು ಭಾರತದ ಎಲ್ಲ ಭಾಷೆಗಳಿಗೂ ಎಲ್ಲ ಪ್ರದೇಶಗಳಿಗೂ ಸಮಾನವಾದ ಸಾಂಸ್ಕೃತಿಕ ಭಾಷೆಯಾಗಿದೆ. ಸಂಸ್ಕೃತಭಾಷೆ ಬೇರೆ

ಯಾವುದೇ ಭಾಷೆಯ ಜೊತೆ ಸ್ಪರ್ಧೆಗಿಳಿಸದು. ಅದು ಯಾವುದೇ ಭಾಷೆಯ ವಿರೋಧಿಯೂ ಅಲ್ಲ.

### ● ಸಂಸ್ಕೃತದ ಭವಿಷ್ಯ ಹೇಗಿದೆ ?

ಸಂಸ್ಕೃತದ ಭವಿಷ್ಯ ತುಂಬ ಉಜ್ಜ್ವಲವಾಗಿದೆ. ದೇಶದಲ್ಲದ ಸಂಸ್ಕೃತ ವಿದ್ಯಾರ್ಥಿಗಳ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿದೆ. ಪ್ರಪಂಚದ ೩೫ ದೇಶಗಳಲ್ಲಿ ಸಂಸ್ಕೃತದ ಅಧ್ಯಯನ ಸಾಗಿದೆ. ೧೧೦ ವೈಜ್ಞಾನಿಕ ಸಂಸ್ಥೆಗಳು ಸಂಸ್ಕೃತ-ಶಾಸ್ತ್ರಗಳಿಗೆ ಸಂಬಂಧಿಸಿದ ಸಂಶೋಧನೆಯಲ್ಲಿ ನಿರತವಾಗಿವೆ. ಕಂಪ್ಯೂಟರ್‌ವಿಜ್ಞಾನಿಗಳೂ ಸಂಸ್ಕೃತ ಕಲಿಯಲು ಮೊದಲು ಮಾಡಿದ್ದಾರೆ. ಭಾರತದಲ್ಲಿಂದು ಸುಮಾರು ೮೦ ಲಕ್ಷ ಜನರು ಸಂಸ್ಕೃತ ಕಲಿಯುತ್ತಿದ್ದಾರೆ. ಒಟ್ಟು ೧೦ ಸಂಸ್ಕೃತ ವಿಶ್ವವಿದ್ಯಾಲಯಗಳು ಇಂದಿವೆ. ಸಂಸ್ಕೃತ ವಿಭಾಗವುಳ್ಳ ವಿಶ್ವವಿದ್ಯಾಲಯಗಳು ಪ್ರತಿರಾಜ್ಯದಲ್ಲೂ ಹಲವಾರಿವೆ. ಹೀಗೆ ಸಂಸ್ಕೃತದ ಉಜ್ಜ್ವಲ ಭವಿಷ್ಯವನ್ನು ಸೂಚಿಸುವ ಹಲವಾರು ಅಂಶಗಳನ್ನು ನಾವು ಉದಾಹರಿಸಬಹುದಾಗಿದೆ. ಮುಂದಿನ ಐದು ವರ್ಷಗಳಲ್ಲಿ ಸಂಸ್ಕೃತದ ಚಿತ್ರ ಬದಲಾಗಲಿದೆ. ಹಿರಿಯರು ಹೇಳುತ್ತಾರೆ - "ಸಂಸ್ಕೃತದ ನವೋದಯ ಕಾಲ ಆರಂಭಗೊಂಡಿದೆ. ೨೧ನೇ ಶತಮಾನ ಸಂಸ್ಕೃತ ಶತಮಾನವಾಗಲಿದೆ."



ಹಾರ್ದಿಕ ಶುಭಾಶಯಗಳೊಂದಿಗೆ





## ರಾಷ್ಟ್ರೀಯ ಶಿಕ್ಷಣ ಸಮಿತಿ ಟ್ರಸ್ಟ್

ಜಯನಗರ ೨ನೇ ಬ್ಲಾಕ್, ಬೆಂಗಳೂರು - ೫೬೦ ೦೧೧

## ಇದು ಆ ಶಿಕ್ಷಣಪದ್ಧತಿಯಲ್ಲ -

ತಾವು ಶಾಲಾಕಾಲೇಜುಗಳಲ್ಲಿ ಓದುವಾಗ ಇದ್ದ ಸಂಸ್ಕೃತ ಶಿಕ್ಷಣ ವಿಧಿ ಇದಲ್ಲ. ಶಬ್ದರೂಪಗಳ ಉರು ಹೊಡೆಯುವಿಕೆಯಿಲ್ಲಿಲ್ಲ. ವ್ಯಾಕರಣದ ಹೊರೆಯಿಲ್ಲದಂತೆ ಹೊಸಪದ್ಧತಿಯ ಮೂಲಕ ಅಂಚೆ ಮೂಲಕ ಸಂಸ್ಕೃತ ಕಲಿಸಲಾಗುವುದು. ಎರಡು ವರ್ಷಗಳೊಳಗಾಗಿ ತಾವು ಸಂಸ್ಕೃತ ಗ್ರಂಥಗಳನ್ನು ಓದಿ ಅರ್ಥೈಸಿಕೊಳ್ಳಬಲ್ಲಿರಿ, ಸಂಸ್ಕೃತದಲ್ಲಿ ಮಾತನಾಡಬಲ್ಲಿರಿ ಕೂಡ !

ಕಳೆದ 20 ವರ್ಷಗಳ ಶೈಕ್ಷಣಿಕ ಪ್ರಯೋಗ ಹಾಗೂ ಅನುಭವಗಳಿಂದ ಪರಿಪಕ್ವವಾದ ಪಾಠ್ಯಕ್ರಮ. ಅಂಚೆ ಮೂಲಕ ಸಂಸ್ಕೃತಸರಸ್ವತಿಯು ನಿಮ್ಮ ಮನೆಗೆ ಹರಿದು ಬರುತ್ತಾಳೆ. ಪ್ರತಿ ಆರು ತಿಂಗಳಿಗೊಮ್ಮೆ (ಫೆಬ್ರವರಿ/ಆಗಸ್ಟ್) ಪರೀಕ್ಷೆ ಹಾಗೂ ಹೊಸತಂಡಕ್ಕೆ ಪ್ರವೇಶಾವಕಾಶ. ಪಾಸಾದವರಿಗೆ ಪ್ರಮಾಣಪತ್ರ ನೀಡಲಾಗುವುದು.

ಹೆಚ್ಚಿನ ವಿವರಗಳಿಗಾಗಿ ರೂ. 5.00 ರ ಅಂಚೆ ಚೀಟಿಯುಳ್ಳ ಸ್ವವಿಳಾಸವಿರುವ ಲಕೋಟೆಯೊಂದಿಗೆ ಸಂಪರ್ಕಿಸಿ -

## ಅಂಚೆ ಮೂಲಕ ಸಂಸ್ಕೃತ

ಸಂಸ್ಕೃತ ಭಾರತೀ

'ಅಕ್ಷರಂ', ೮ನೇ ಅಡ್ಡರಸ್ತೆ, ೨ನೇ ಹಂತ, ಗಿರಿನಗರ,

ಬೆಂಗಳೂರು - 560 085. © 6721052

**ಸಂಸ್ಕೃತ ಕಲಿಯಿರಿ ಹಾಗೂ ಭಾರತದ ಜ್ಞಾನಸಿಂಧುವನ್ನೂ ಸಾಂಸ್ಕೃತಿಕ ಗಂಗೆಯನ್ನೂ ಅರಿಯಿರಿ.**